| 1 | 2 | 3 | 4 | 5 | 6 | 7 | 8 | 9 | 10 | 11 | 12 |
|---|---|---|---|---|---|---|---|---|---|---|---|
| 3. | 90 | Krishna murthy A.T. | ST | 06.03.71 | 31.00.10 | B.Sc. (Agri Maco) | | | | 70.300 | 70.300 |
| 4. | 334 | T. Venkatesh | ST | 25.06.68 | 33.08.21 | B.Sc. (Forestry) | | | | 64.750 | 64.750 |
| 5. | 2593 | Lingaraja | ST | 01.01.73 | 29.02.15 | B.A. | 62.000 | 57.428 | 64.333 | -- | 61.476 |
| 6. | 3452 | Kishore Nagadev N. | ST | 23.12.69 | 32.02.23 | B.A. | 59.200 | 56.800 | 66.833 | -- | 60.944 |
| 7 to 224 | Other ST Candidates | | | | | | | | | | |
| 225 | 3436 | Thippeswamy P. (Applicant) | ST | 10.06.62 | 39.09.06 | B.A. | 40.000 | 43.000 | 38.444 | | 40.481 |
| 226 and Onwards | Other ST Candidates | | | | | | | | | | |

ಮೇಲ್ಕಂಡ Merit List ಪ್ರಕಾರ ಎನ್. ಗುರುನಾಥ (Respondent-3) ಎಂಬುವವರು B.Sc. (Agri) ಡಿಗ್ರಿಯಲ್ಲಿ ಶೇ.72.200 ರಷ್ಟು ಅಂಕಗಳಿಸಿ Merit List ನಲ್ಲಿ ಮೊದಲನೇ ಸ್ಥಾನ ಪಡೆದುಕೊಂಡಿರುತ್ತಾರೆ. ಇದೇ ರೀತಿ ನಿಜಗೊಂಡ ಎಂಬುವವರು B.Sc. (Agri-Maco) ಡಿಗ್ರಿಯಲ್ಲಿ ಶೇ.71.100 ರಷ್ಟು ಅಂಕಗಳಿಸಿ Merit List ನಲ್ಲಿ ಎರಡನೇ ಸ್ಥಾನ ಪಡೆದುಕೊಂಡಿರುತ್ತಾರೆ. ಆದರೆ ಸದರಿ ಪಿ. ತಿಪ್ಪೇಸ್ವಾಮಿ ಯವರು BA ಡಿಗ್ರಿಯಲ್ಲಿ ಶೇ. 40.481 ರಷ್ಟು ಸರಾಸರಿ ಅಂಕಗಳಿಸಿ Merit List ನಲ್ಲಿ 225ನೇ ಸ್ಥಾನ ಪಡೆದುಕೊಂಡಿರುತ್ತಾರೆ.

ಈ ಇಲಾಕೆಯ ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಮಾತ್ರ ಗುರುತಿಸಿ Notify ಮಾಡಿರುವ ಪ್ರಯುಕ್ತ ಒಬ್ಬ ಅಭ್ಯರ್ಥಿಯನ್ನು ಮಾತ್ರ ಆಯ್ಕೆ ಮಾಡಲು ಅವಕಾಶವಿರುತ್ತದೆಯೇ ಹೊರತು ಒಂದಕ್ಕಿಂತ ಹೆಚ್ಚು ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಬ್ಯಾಕ್‌ಲಾಗ್ ನಿಯಮಗಳಲ್ಲಿ ಅವಕಾಶವಿರುವುದಿಲ್ಲ ಆದ್ದರಿಂದ ಉಲ್ಲೇಖ (3)ರ ಸರ್ಕಾರದ ಅಧಿಸೂಚನೆಯಲ್ಲಿ ಪ್ರಕಟಿಸಿದ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ (First Amendment) Rules, 2001 ರಲ್ಲಿನ ನಿರ್ದೇಶನದಂತೆ 1:1ರ ಪ್ರಮಾಣದಲ್ಲಿ ಅಭ್ಯರ್ಥಿಗಳನ್ನು Merit ಆಧಾರದ ಮೇಲೆ ಮಾತ್ರ ಆಯ್ಕೆ ಮಾಡಬೇಕಾಗಿದ್ದು, ಅದರಂತೆ ಮೇಲ್ಕಂಡ Merit List ನಲ್ಲಿ ತೋರಿಸಿರುವ ಅಭ್ಯರ್ಥಿಗಳ ಪೈಕಿ B.Sc (Agri) ಡಿಗ್ರಿಯಲ್ಲಿ ಶೇ.72.200ರಷ್ಟು ಅಂಕಗಳಿಸಿ Merit ಪ್ರಕಾರ ಮೊದಲನೆ ಸ್ಥಾನದಲ್ಲಿರುವ ಎನ್.ಗುರುನಾಥ ಎಂಬುವರನ್ನು ಮುಖ್ಯ ಪಟ್ಟಿಯಲ್ಲೂ ಮತ್ತು B.Sc. (Agri-Maco) ಡಿಗ್ರಿಯಲ್ಲಿ ಶೇ.71.100 ರಷ್ಟು ಅಂಕಗಳಿಸಿ Merit ಪ್ರಕಾರ ಎರಡನೇ ಸ್ಥಾನದಲ್ಲಿರುವ ನಿಜಗೊಂಡ ಎಂಬುವರನ್ನು ಹೆಚ್ಚುವರಿ ಪಟ್ಟಿಯಲ್ಲೂ ಆಯ್ಕೆ ಮಾಡಿ ಉಲ್ಲೇಖ (5)ರನ್ವಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 1:1ರ ಪ್ರಮಾಣದಲ್ಲಿ ಪ್ರಕಟಿಸಲಾಯಿತು ಹಾಗೂ ಸದರಿ ಆಯ್ಕೆಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅವುಗಳನ್ನು ಮೂವತ್ತು ದಿನಗಳಲ್ಲಿ ಲಿಖಿತ ಮೂಲಕ ಸಲ್ಲಿಸುವಂತೆ ಅಭ್ಯರ್ಥಿಗಳಿಗೆ ಸೂಚಿಸಲಾಯಿತು.

ಸದರಿ ತಾತ್ಕಾಲಿಕ ಆಯ್ಕೆ ಪಟ್ಟಿಯ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಆಯ್ಕೆಯಾದ ಸದರಿ ಎನ್. ಗುರುನಾಥ (Respondent-3) ಇವರನ್ನು ಅಂತಿಮವಾಗಿ ಆಯ್ಕೆ ಮಾಡುವುದಕ್ಕಾಗಿ ಇವರು ಬ್ಯಾಕ್‌ಲಾಗ್ ಅರ್ಜಿಯ ಜೊತೆ ಸಲ್ಲಿಸಿದ ಪದವೀ ಪರೀಕ್ಷೆಯ ಮೂಲ ಅಂಕಪಟ್ಟಿಯನ್ನು ಮತ್ತು ಎಲ್ಲಾ ಪ್ರಮಾಣ ಪತ್ರದ ಮೂಲ ದಾಖಲೆಗಳನ್ನು ಸತ್ಯಾಪನೆಗಾಗಿ ಈ ಕಛೇರಿಗೆ ಖುದ್ದಾಗಿ ಹಾಜರ್ ಪಡಿಸುವಂತೆ ಸೂಚಿಸಿ ಸದರಿ ಎನ್. ಗುರುನಾಥ ಇವರಿಗೆ ಈ ಕಛೇರಿಯಿಂದ ದಿನಾಂಕ:11.04.2003 ರಂದು ಹಿಂಬರಹ ನೀಡಲಾಯಿತು. ಸದರಿ ಹಿಂಬರಹಕ್ಕೆ ಉತ್ತರವಾಗಿ ಎನ್. ಗುರುನಾಥ ರವರು ಅವರ ವಿದ್ಯಾರ್ಹತೆಗೆ ಸಂಬಂಧಿಸಿದ ಯಾವುದೇ ಮೂಲ ದಾಖಲೆಗಳನ್ನು ಪರಿಶೀಲನೆಗಾಗಿ ಈ ಕಛೇರಿಗೆ ಹಾಜರ್ ಪಡಿಸದೇ ಇದ್ದುದರಿಂದ ಹಾಗೂ ಸದರಿ ಎನ್. ಗುರುನಾಥ ಇವರ ಜಾತಿ ಸಿಂಧುತ್ವ ಪ್ರಮಾಣ ಪತ್ರವೂ ಸಹ ಜಿಲ್ಲಾಧಿಕಾರಿ ದಾವಣಗೆರೆ ಇವರಿಂದ, ಹಲವಾರು ಬಾರಿ ನೆನಪೋಲೆ ನೀಡಿದ್ದಾಗ್ಯೂ ಬಾರದೇ ಇದ್ದುದರಿಂದ ಸದರಿ ಶ್ರೀ ಎನ್. ಗುರುನಾಥ (Respondent-3) ಇವರಿಗೆ ಉಲ್ಲೇಖ (6)ರನ್ವಯ ಈ ಕಛೇರಿಯಿಂದ ಅಂತಿಮ ನೋಟೀಸ್ ನೀಡಿ, ಸದರಿ ನೋಟೀಸ್ ತಲುಪಿದ ದಿನಾಂಕದಿಂದ ಹದಿನೈದು ದಿನಗಳೊಳಗೆ ಜಾತಿ ಸಿಂಧುತ್ವ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿ ದಾವಣಗೆರೆ ಇವರಿಂದ ಪಡೆದು ಈ ಕಛೇರಿಗೆ ತಲುಪಿಸುವ ವ್ಯವಸ್ಥೆ ಮಾಡುವಂತೆ ನೋಟೀಸ್ ಜಾರಿ ಮಾಡಲಾಯಿತು.

ಮೇಲ್ಕಂಡ ನೋಟೀಸ್‌ಗೆ ಉತ್ತರವಾಗಿ ಸದರಿ ಎನ್. ಗುರುನಾಥ (Respondent-3) ಇವರು ದಿನಾಂಕ:06.09.2004 ರಂದು ಈ ಕಛೇರಿಗೆ ಲಿಖಿತ ಮನವಿಯೊಂದನ್ನು ಸಲ್ಲಿಸಿ, ತಾವು ಈಗಾಗಲೇ ಸರ್ಕಾರದ ಶಾಖಾ ಮುದ್ರಣಾಲಯ, ಧಾರವಾಡ ಇಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕಾತಿ ಹೊಂದಿ ಕಾರ್ಯ ನಿರ್ವಹಿಸುತ್ತಿರುವುದರಿಂದ ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿನ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ

ಮಾಡಿದ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ಹಾಜರಾಗಲು ತಮಗೆ ಇಷ್ಟವಿಲ್ಲದಿರುವುದರಿಂದ ತಮ್ಮ ಈ ಆಯ್ಕೆಯನ್ನು ರದ್ದುಗೊಳಿಸಿ ಅರ್ಹರಾದ ಬೇರೆ ಅಭ್ಯರ್ಥಿಯನ್ನು ಆಯ್ಕೆ ಮಾಡಬಹುದೆಂದು ಮನವಿಯಲ್ಲಿ ಕೋರಿಕೊಂಡ ಕಾರಣ ಮುಖ್ಯಪಟ್ಟಿಯಲ್ಲಿ ತಾತ್ಕಾಲಿಕವಾಗಿ ಆಯ್ಕೆಯಾಗಿದ್ದ ಸದರಿ ಎನ್. ಗುರುನಾಥ ಇವರ ತಾತ್ಕಾಲಿಕ ಆಯ್ಕೆಯನ್ನು ಉಲ್ಲೇಖ (8)ರನ್ವಯ ರದ್ದುಪಡಿಸಿ, ಸದರಿ ಎನ್. ಗುರುನಾಥ ಇವರ ಬದಲಿಗೆ, ಶೇ.71.100 ರಷ್ಟು ಅಂಕಗಳಿಸಿ Merit List ನಲ್ಲಿ ಎರಡನೇ ಸ್ಥಾನ ಪಡೆದುಕೊಂಡಿದ್ದ ಹಾಗೂ ತಾತ್ಕಾಲಿಕ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾಗಿದ್ದ ಶ್ರೀ . ನಿಜಗೊಂಡ ಎಂಬ ಪರಿಶಿಷ್ಟ ಪಂಗಡದ ಒಬ್ಬ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು Merit ಆಧಾರದ ಮೇಲೆ ಈ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಸದರಿ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಕಾನೂನು ರೀತ್ಯ ಮುಖ್ಯ ಪಟ್ಟಿಯಲ್ಲಿ ಅಂತಿಮವಾಗಿ ಆಯ್ಕೆ ಮಾಡಿ, ಇವರನ್ನು ಮುಖ್ಯಪಟ್ಟಿಗೆ ಆಯ್ಕೆ ಮಾಡಲ್ಪಟ್ಟ ಪ್ರಯುಕ್ತ Merit List ನಲ್ಲಿ ಮೂರನೇ ಸ್ಥಾನದಲ್ಲಿದ್ದ ಹಾಗೂ B.Sc. (Agri Maco) ಡಿಗ್ರಿಯಲ್ಲಿ ಶೇ.70.300 ರಷ್ಟು ಅಂಕ ಪಡೆದಿರುವ ಎ.ಟಿ. ಕೃಷ್ಣಮೂರ್ತಿ ಎಂಬುವವರನ್ನು ಕಾನೂನು ರೀತ್ಯ ಹೆಚ್ಚುವರಿ ಪಟ್ಟಿಯಲ್ಲಿ ಅಂತಿಮವಾಗಿ ಆಯ್ಕೆ ಮಾಡಿ ಉಲ್ಲೇಖ (9) ರನ್ವಯ ಪ್ರಥಮ ದರ್ಜೆ ಸಹಾಯಕ ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಆಯ್ಕೆ ಪಟ್ಟಿಯನ್ನು 1:1ರ ಪ್ರಮಾಣದಲ್ಲಿ ಪ್ರಕಟಿಸಲಾಯಿತು.

ಈ ರೀತಿ ಉಲ್ಲೇಖ (9) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ಅಂತಿಮ ಆಯ್ಕೆ ಮುಖ್ಯ ಪಟ್ಟಿಯಲ್ಲಿ ಕಂಡುಬಂದ ಸದರಿ ನಿಜಗೊಂಡ (ಪರಿಶಿಷ್ಟ ಪಂಗಡ) ಎಂಬುವವರನ್ನು ಮೇಲ್ಕಂಡಂತೆ ಗುರುತಿಸಲ್ಪಟ್ಟ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ಉಲ್ಲೇಖ (10) ರನ್ವಯ ದಿನಾಂಕ:01.12.2004ರಂದು ಈ ಇಲಾಖೆಯಲ್ಲಿ ನೇಮಕ ಮಾಡಲಾಗಿ ಸದರಿಯವರು, ಎನ್. ಗುರುನಾಥ (Respondent-3) ಇವರ ಬದಲಿಗೆ ದಿನಾಂಕ:23.12.2004 ರಂದು ಪ್ರಥಮ ದರ್ಜೆ ಸಹಾಯಕರೆಂದು ಕೆಲಸಕ್ಕೆ ಹಾಜರಾಗಿರುತ್ತಾರೆ.

ಈ ರೀತಿ ಈ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಪ್ರಥಮ ದರ್ಜೆ ಸಹಾಯಕರ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಶ್ರೀ ಎನ್. ಗುರುನಾಥ (Respondent-3) ಎಂಬುವವರ ಬದಲಿಗೆ ಶ್ರೀ ನಿಜಗೊಂಡ ಎಂಬುವವರನ್ನು ಆಯ್ಕೆ ಮಾಡಿ ನೇಮಕ ಮಾಡಿರುವುದು ಎಲ್ಲಾ ರೀತಿಯಲ್ಲೂ ಸಮಂಜಸವಾಗಿದ್ದು, ಕ್ರಮಬದ್ಧವಾಗಿರುತ್ತದೆ.

ಈ ರೀತಿ ಸದರಿ ಶ್ರೀ ಪಿ. ತಿಪ್ಪೇಸ್ವಾಮಿಯವರನ್ನು ವಯಸ್ಸಿನ ಆಧಾರದ ಮೇಲೆ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡದೇ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರ ಪ್ರಕಾರ ಇವರಿಗಿಂತ ಹೆಚ್ಚು ಶೇಕಡಾವಾರು ಅಂಕಗಳಿಸಿದವರನ್ನು ಆಯ್ಕೆ ಮಾಡಿ ನೇಮಕ ಮಾಡಿರುವುದರ ವಿರುದ್ಧ ಸದರಿ ಶ್ರೀ ಪಿ. ತಿಪ್ಪೇಸ್ವಾಮಿ ಇವರು ಗೌ: KAT ಯಲ್ಲಿ ಅರ್ಜಿಸಂಖ್ಯೆ: 521/2004 ಅನ್ನು ದಾಖಲಿಸಿ ದಾವೆ ಹೂಡಿದ್ದರ ಮೇರೆ ಗೌ: KAT ಯವರು ಅರ್ಜಿ ಸಂಖ್ಯೆ:521/2004ರ ಮೇಲೆ ದಿನಾಂಕ:05.10.2007 ರಂದು ಕೆಳಕಂಡಂತೆ ಆದೇಶ ಮಾಡಿರುತ್ತಾರೆ. ಸದರಿ ಗೌ: KAT ಆದೇಶದ ಉಧೃತ ಭಾಗವನ್ನು (Extract ಅನ್ನು) ಇಲ್ಲಿ ಕೊಡಲಾಗಿದೆ.

**EXTRACT OF THE HON'BLE KAT ORDER**

**ORDER**

i) The application is disposed of;

ii) respondents-I & 2 are directed to consider the representation Dated:09.04.2003 (Annexure A5) given by the applicant and pass appropriate orders, in accordance with law, within three months from the date a certified copy of this order is received by them and communicate the result thereof to the applicant forthwith.

Sd/-
CHAIRMAN

ಸದರಿ ಗೌ: KAT ಆದೇಶದ (Certified copy ಯು) ದೃಢೀಕೃತ ಪ್ರತಿಯು ಈ ಕಛೇರಿಯಲ್ಲಿ ದಿನಾಂಕ:24.10.2007ರಂದು (ಅರ್ಜಿದಾರರಾದ ಶ್ರೀ ಪಿ. ತಿಪ್ಪೇಸ್ವಾಮಿ, ಇವರು ದಿನಾಂಕ:24.10.2007 ರಂದು ಈ ಕಛೇರಿಗೆ ಸಲ್ಲಿಸಿದ ಲಿಖಿತ ಮನವಿಯೊಂದಿಗೆ) ಸ್ವೀಕೃತವಾಗಿದ್ದು, ಸದರಿ ಅಭ್ಯರ್ಥಿಯು ದಿನಾಂಕ:09.04.2003 ರಂದು ಈ ಕಛೇರಿಗೆ ಸಲ್ಲಿಸಿದ ಲಿಖಿತ ಮನವಿಯನ್ನು ಅಂದರೆ Annexure-A5 ಅನ್ನು ಮೇಲ್ಕಂಡ ಗೌ: KAT ಯ ಆದೇಶದ ಪ್ರಕಾರ ಕೂಲಂಕುಷವಾಗಿ ಪರಿಶೀಲಿಸಲಾಯಿತು.

ಸದರಿ ಶ್ರೀ ಪಿ. ತಿಪ್ಪೇಸ್ವಾಮಿ, ಚಳ್ಳಕೆರೆ ಇವರು ದಿನಾಂಕ:09.04.2003 ರ Annexure-A5 ನಲ್ಲಿ ತಾವು ಈಗಾಗಲೇ ಪ್ರಥಮ ದರ್ಜೆ ಸಹಾಯಕರ ಹುದ್ದೆಗಾಗಿ ಅರ್ಜಿಯನ್ನು ಕೊಟ್ಟಿದ್ದು ಅದರೊಂದಿಗೆ ಎಲ್ಲಾ ದಾಖಲೆಗಳನ್ನು ಒದಗಿಸಿದ್ದರ ಮೇರೆ ಅವುಗಳನ್ನು ಪರಿಶೀಲಿಸಿದಾಗ್ಯೂ ತಮ್ಮ ಹೆಸರು ಬ್ಯಾಕ್‌ಲಾಗ್ ಆಯ್ಕೆಪಟ್ಟಿಯಲ್ಲಿ ನಮೂದಿಸಿರುವುದಿಲ್ಲವೆಂದು, ಇದರಿಂದ ತಾವು ಬಹಳ ನೊಂದಿರುವುದಾಗಿ ತಿಳಿಸುತ್ತಾ ತಮಗೆ ಇಬ್ಬರು ಮಕ್ಕಳಿದ್ದು ತಮಗೆ ವಯಸ್ಸು ಹೆಚ್ಚಾಗಿದ್ದು, ತಮ್ಮ ಹೆಸರು ಪಟ್ಟಿಯಲ್ಲಿ ಇಲ್ಲದಿರುವುದರಿಂದ ತಮ್ಮ ಕುಟುಂಬದ ಜೀವನಾಧಾರಕ್ಕೆ ಈ ಉದ್ಯೋಗವನ್ನು ನನ್ನ ಮೇಲೆ ಅನುಕಂಪ ಸೂಚಿಸಿ ತಮಗೆ ತಪ್ಪದೇ ನೀಡುವಂತೆ ಕಳಕಳಿಯಿಂದ ಮನವಿ ಮಾಡಿರುತ್ತಾರೆ.

ಸದರಿ ಅರ್ಜಿದಾರರ ಮೇಲ್ಕಂಡ ಮನವಿಯನ್ನು ಉಲ್ಲೇಖ (1) ರ SC/ST ವಿಶೇಷ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರ ಅಡಿಯಲ್ಲಿ ಉಲ್ಲೇಖ (12) ರ ಗೌ: KAT ಯ ಆದೇಶದ ಪ್ರಕಾರ ಕೂಲಂಕುಷವಾಗಿ ಪರಿಶೀಲಿಸಲಾಗಿ ಈಗಾಗಲೇ Notify ಮಾಡಿದ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಸದರಿ ಒಂದು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆಯಾಗಿ ನೇಮಕಗೊಂಡಿರುವ ನಿಜಗೊಂಡ ಎಂಬ ಬ್ಯಾಕ್‌ಲಾಗ್ ಅಭ್ಯರ್ಥಿಗಿಂತ ಸದರಿ ಪಿ.ತಿಪ್ಪೇಸ್ವಾಮಿ ರವರು ವಯಸ್ಸಿನಲ್ಲಿ ದೊಡ್ಡವರಾಗಿದ್ದರೂ (ಹಿರಿಯರಾಗಿದ್ದರೂ) ಸಹ ಇವರು B.A. ಡಿಗ್ರಿಯಲ್ಲಿ ಕಡಿಮೆ ಶೇಕಡಾವಾರು ಅಂಕಗಳಿಸಿರುವುದರಿಂದ ಅಂದರೆ B.A. Degree ಯಲ್ಲಿ ಇವರು ಶೇಕಡಾ 40.481ರಷ್ಟು ಅಂಕಗಳಿಸಿರುವುದರಿಂದ ಉಲ್ಲೇಖ (1)ರ SC/ST ವಿಶೇಷ ಬ್ಯಾಕ್‌ಲಾಗ್ ನೇಮಕಾತಿ ನಿಯಮಗಳಲ್ಲಿನ ನಿಯ 6(1)ರ ಪ್ರಕಾರ ವಯಸ್ಸಿನ ಆಧಾರದ ಮೇಲೆ ಇವರು ಆಯ್ಕೆ ಹೊಂದಲು ಅರ್ಹರಾಗಿರುವುದಿಲ್ಲ.

1) ಮೇಲ್ಕಂಡ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 5ರನ್ವಯ ಬ್ಯಾಕ್‌ಲಾಗ್ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸಿದ ಅಭ್ಯರ್ಥಿಗಳ ಪೈಕಿ 29 ವರ್ಷ ತುಂಬಿರುವ ಹಾಗೂ 40 ವರ್ಷ ತುಂಬದೇ ಇರುವ ಅಭ್ಯರ್ಥಿಗಳ ಒಂದು ಪಟ್ಟಿಯನ್ನು ಸದರಿ ಅಭ್ಯರ್ಥಿಗಳು ಅರ್ಹತಾದಾಯಕ ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳ ಆಧಾರದ ಮೇಲೆ ಪ್ರತಿಯೊಂದು Category ಗೂ ಸಂಬಂಧಿಸಿದಂತೆ ಆಯ್ಕೆ ಪ್ರಾಧಿಕಾರಿಗಳು Merit List ಅನ್ನು ತಯಾರಿಸಬೇಕೆಂದು ಸದರಿ ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರಲ್ಲಿ ಸ್ಪಷ್ಟವಾಗಿ ಸ್ಪಷ್ಟೀಕರಿಸಿರುತ್ತಾರೆ.

2) ಸದರಿ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರಲ್ಲಿ ಅಭ್ಯರ್ಥಿಗಳ ಆಯ್ಕೆಯನ್ನು ಅವರ ವಯೋಮಿತಿಗಳಿಗೆ ಅನುಗುಣವಾಗಿ ಅಂದರೆ ವಯಸ್ಸಿನ ಆಧಾರದ ಮೇಲೆ ಮಾಡಬೇಕೆಂದು ಎಲ್ಲೂ ಹೇಳಿರುವುದಿಲ್ಲ. Which means age is not the criteria for selection of Candidates and it is no where stated in Rule 6(1) of Backlog Rules that priority should be given to the persons who are older in age.

3) ಮೇಲೆ ಹೇಳಿರುವ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರಲ್ಲಿ 29 ವರ್ಷ ತುಂಬಿರುವ ಹಾಗೂ 40 ವರ್ಷ ತುಂಬದೇ ಇರುವ ಅಭ್ಯರ್ಥಿಗಳಲ್ಲಿ ಅಭ್ಯರ್ಥಿಗಳು ಅರ್ಹತಾದಾಯಕ ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು Merit ಪ್ರಕಾರ ಆಯ್ಕೆ ಪಟ್ಟಿಯೊಂದನ್ನು ತಯಾರಿಸಬೇಕೆಂದು ಸ್ಪಷ್ಟವಾಗಿ ಸ್ಪಷ್ಟೀಕರಿಸಲಾಗಿದೆ.

4) ಸದರಿ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನಿಯಮಗಳಲ್ಲಿನ ನಿಯಮ 6(1)ರ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಬ್ಯಾಕ್‌ಲಾಗ್ ಅಭ್ಯರ್ಥಿಗಳಲ್ಲಿ Merit ಅನ್ನು ಮಾತ್ರ ಪರಿಗಣಿಸಬೇಕಾಗುತ್ತದೆ. ಅಂದರೆ ಅಂಗೀಕೃತ ವಿಶ್ವವಿದ್ಯಾನಿಲಯದ ಪದವಿಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳನ್ನು ಮಾತ್ರ ಆಯ್ಕೆಗಾಗಿ ಪರಿಗಣಿಸಬೇಕಾಗುತ್ತದೆ. ಹಾಗೂ ವಯಸ್ಸಿನ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಸದರಿ ನಿಯಮಗಳಲ್ಲಿ ಅವಕಾಶವಿರುವುದಿಲ್ಲ.

5) ಮೇಲ್ಕಂಡ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳ ನಿಯಮ 6(1)ರಲ್ಲಿನ ನಿರ್ದೇಶನದಂತೆ ಬ್ಯಾಕ್‌ಲಾಗ್ ಹುದ್ದೆಯಲ್ಲಿನ ಆಯ್ಕೆಗಾಗಿ ಅರ್ಜಿ ಸಲ್ಲಿಸಿದ್ದ 658 ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಪೈಕಿ ಬ್ಯಾಕ್‌ಲಾಗ್ ಅರ್ಜಿಗಳನ್ನು ಸಲ್ಲಿಸುವ ಕೊನೆ ದಿನಾಂಕಕ್ಕೆ ಅಂದರೆ 16.03.2002ಕ್ಕೆ 29 ವರ್ಷ ತುಂಬಿರುವ ಹಾಗೂ 40 ವರ್ಷ ತುಂಬದೇ ಇರುವ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳ ಅರ್ಜಿಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಅಂತಹವರುಗಳು ಅಂಗೀಕೃತ ವಿಶ್ವವಿದ್ಯಾಲಯದ ಪದವೀ ಪರೀಕ್ಷೆಯಲ್ಲಿ ಗಳಿಸಿದ ಶೇಕಡಾವಾರು ಅಂಕಗಳ ಆಧಾರದ ಮೇಲೆ Merit ಪ್ರಕಾರ Merit List ಅನ್ನು ತಯಾರಿಸಿರುವುದು ಎಲ್ಲಾ ರೀತಿಯಲ್ಲೂ ಸಮಂಜಸವಾಗಿದ್ದು ಕಾನೂನು ರೀತ್ಯಾ ಕ್ರಮಬದ್ಧವಾಗಿರುತ್ತದೆ. Merit List ತಯಾರಿಸುವಲ್ಲಿ ಯಾವುದೇ ರೀತಿಯ ಕಾನೂನು ಉಲ್ಲಂಘನೆಯಾಗಿರುವುದಿಲ್ಲ.

ಸದರಿ ಉಲ್ಲೇಖ (1)ರ SC/ST ವಿಶೇಷ ಬ್ಯಾಕ್‌ಲಾಗ್ ನಿಯಮಗಳಲ್ಲಿನ ನಿಯಮ 6(1)ರಲ್ಲಿ ಹೇಳಿದ ವಿಧಿ ವಿಧಾನಗಳನ್ನು ಕಟ್ಟುನಿಟ್ಟಾಗಿ ಪಾಲಿಸಿ ಮೇಲ್ಕಂಡ ಒಬ್ಬ ಪರಿಶಿಷ್ಟ ಪಂಗಡದ ಅಭ್ಯರ್ಥಿಯನ್ನು Merit ಆಧಾರದ ಮೇಲೆ ನ್ಯಾಯ ಸಮ್ಮತವಾಗಿ ಆಯ್ಕೆ ಮಾಡಲಾಗಿದೆ. ಹಾಗೂ ಆಯ್ಕೆ ಪ್ರಕ್ರಿಯೆಯಲ್ಲಿ ಯಾವುದೇ ರೀತಿಯ ಬ್ಯಾಕ್‌ಲಾಗ್ ನಿಯಮಗಳ ಉಲ್ಲಂಘನೆಯಾಗಿರುವುದಿಲ್ಲ. ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಆಯ್ಕೆ ಮಾಡುವಾಗ Merit ಅನ್ನು ಪರಿಗಣಿಸದೇ ವಯಸ್ಸಿನ ಆಧಾರದ ಮೇಲೆ ವಯಸ್ಸಿನಲ್ಲಿ ದೊಡ್ಡವರಾದವರನ್ನು ಬ್ಯಾಕ್‌ಲಾಗ್ ಹುದ್ದೆಯಲ್ಲಿ ಆಯ್ಕೆ ಮಾಡಬೇಕೆಂಬ ಅರ್ಜಿದಾರರಾದ ಸದರಿ ಶ್ರೀ ಪಿ. ತಿಪ್ಪೇಸ್ವಾಮಿ ಇವರ ವಾದದಲ್ಲಿ ಯಾವುದೇ ರೀತಿಯ ಸತ್ಯಾಂಶವಿರುವುದಿಲ್ಲ ಹಾಗೂ ಇವರ ವಾದವು ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಿಗೆ ವಿರುದ್ಧವಾಗಿರುತ್ತದೆಂದು ಅಭಿಪ್ರಾಯ ಪಡುತ್ತಾ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: EST 2–236/ 2003–04, ದಿನಾಂಕ:6ನೇ ಡಿಸೆಂಬರ್, 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಹಾಗೂ ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ವೃಂದದಲ್ಲಿ ಪರಿಶಿಷ್ಟ ಪಂಗಡದ ಒಂದು ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ ಅರ್ಜಿ ಕರೆದಿದ್ದರ ಮೇರೆ ಒಬ್ಬ ಪರಿಶಿಷ್ಟ ಪಂಗಡದ ಅಭ್ಯರ್ಥಿಯನ್ನು ಮಾತ್ರ ಆಯ್ಕೆ ಮಾಡಬೇಕಾಗಿದ್ದು ಅದರಂತೆ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿನ ನಿಯಮ 6(1)ರ ಅಡಿಯಲ್ಲಿ ಕಾನೂನುಬದ್ಧವಾಗಿ Merit ಆಧಾರದ ಮೇಲೆ ಶ್ರೀ ನಿಜಗೊಂಡ ಎಂಬ ಪರಿಶಿಷ್ಟ ಪಂಗಡದ ಒಬ್ಬ ಬ್ಯಾಕ್‌ಲಾಗ್ ಅಭ್ಯರ್ಥಿಯನ್ನು ಮಾತ್ರ ಸದರಿ ಎನ್.ಗುರುನಾಥ (Respondent-3) ಇವರ ಬದಲಿಗೆ ನಿಯಮಾನುಸಾರ ಈಗಾಗಲೇ ಉಲ್ಲೇಖ (9)ರನ್ವಯ ಪ್ರಥಮ ದರ್ಜೆ ಸಹಾಯಕರೆಂದು Merit ಆಧಾರದ ಮೇಲೆ ಆಯ್ಕೆಮಾಡಿರುವುದರಿಂದ ಹಾಗೂ ಸದರಿ ನಿಜಗೊಂಡ ಎಂಬುವರನ್ನು ಪ್ರಥಮ ದರ್ಜೆ ಸಹಾಯಕರೆಂದು ಉಲ್ಲೇಖ (10)ರನ್ವಯ ನೇಮಕ ಮಾಡಿದ್ದರ ಮೇರೆ ಸದರಿಯವರು ಈ ಇಲಾಖೆಯಲ್ಲಿ ದಿನಾಂಕ:23.12.2004 ರಂದು ಪ್ರಥಮ ದರ್ಜೆ ಸಹಾಯಕರಾಗಿ ಕೆಲಸಕ್ಕೆ ಹಾಜರಾಗಿರುವುದರಿಂದ ಶ್ರೀ ಪಿ.ತಿಪ್ಪೇಸ್ವಾಮಿ (Applicant) S/o ಬೊಮ್ಮಯ್ಯ, ಗಾಂಧಿನಗರ, ಎಸ್.ಆರ್. ರೋಡ್, ಚಳ್ಳಕೆರೆ ಇವರನ್ನು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಪರಿಶಿಷ್ಟ ಪಂಗಡದ ಬ್ಯಾಕ್‌ಲಾಗ್ ಹುದ್ದೆಯಲ್ಲಿ ವಯಸ್ಸಿನ ಆಧಾರದ ಮೇಲೆ ಆಯ್ಕೆ ಮಾಡಲು ಹಾಗೂ ನೇಮಕ ಮಾಡಲು ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳ ಪ್ರಕಾರ ಪ್ರದತ್ತವಾದ ಅಧಿಕಾರದ ಮೇರೆಗೆ, 1977ರ KCS (ಸಾಮಾನ್ಯ ನೇಮಕಾತಿ) ನಿಯಮಗಳನ್ನು ಓದಿಕೊಂಡಂತೆ ಶ್ರೀ ಪಿ. ತಿಪ್ಪೇಸ್ವಾಮಿ (Applicant), ಚಳ್ಳಕೆರೆ ಇವರು ಈ ಇಲಾಖೆಯ ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆಗಾಗಿ ಈ ಕಛೇರಿಗೆ ಸಲ್ಲಿಸಿರುವ ಸದರಿಯವರ 07.03.2002ರ ದಿನಾಂಕದ ನಿಗದಿತ ಬ್ಯಾಕ್‌ಲಾಗ್ ಅರ್ಜಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ತಿರಸ್ಕರಿಸಲಾಗಿದೆ (Reject ಮಾಡಲಾಗಿದೆ) ಹಾಗೂ ಉಲ್ಲೇಖ (11)ರನ್ವಯ ದಿನಾಂಕ:09.04.2003 ರಂದು ಸದರಿಯವರು ಈ ಕಛೇರಿಗೆ ಸಲ್ಲಿಸಿದ ಲಿಖಿತ ಮನವಿಯನ್ನು ಸಹ ಅಂದರೆ Annexure-A5 ಅನ್ನು ಸಹ ಉಲ್ಲೇಖ (1)ರ SC/ST ಬ್ಯಾಕ್‌ಲಾಗ್ ವಿಶೇಷ ನೇಮಕಾತಿ ನಿಯಮಗಳ ಅಡಿಯಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ತಿರಸ್ಕರಿಸಲಾಗಿದೆ (Reject ಮಾಡಲಾಗಿದೆ) ಎಂದು ಈ ಮೂಲಕ ಆದೇಶಿಸಿದೆ.

ಇದರ ಜೊತೆಗೆ ಸದರಿ ಅರ್ಜಿದಾರರಾದ ಶ್ರೀ ಪಿ. ತಿಪ್ಪೇಸ್ವಾಮಿ ಇವರು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಆಯ್ಕೆ ಹಕ್ಕನ್ನು ಮತ್ತು ನೇಮಕಾತಿ ಹಕ್ಕನ್ನು ಕಳೆದುಕೊಂಡಿರುವರೆಂದು ಹಾಗೂ ಸದರಿಯವರು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಹೊಂದಿರತಕ್ಕದಲ್ಲವೆಂದು ಹಾಗೂ ಸದರಿಯವರು ಈ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದಲ್ಲವೆಂದು ಈ ಮೂಲಕ ಆದೇಶಿಸಿದೆ.

ಆಯ್ಕೆ ಪ್ರಾಧಿಕಾರಿ ಮತ್ತು ನೇಮಕಾತಿ ಪ್ರಾಧಿಕಾರಿ ಹಾಗೂ
ನೋಂದಣಿ ಮಹಾಪರಿವೀಕ್ಷಕರು ಮತ್ತು
ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್.1573

**ಶಿಕ್ಷಣ ಇಲಾಖೆ**

**ಅಧಿಸೂಚನೆ ಸಂಖ್ಯೆ: ಇಡಿ 117 ಡಿಪಿಐ 2006, ಬೆಂಗಳೂರು, ದಿನಾಂಕ:24ನೇ ನವೆಂಬರ್, 2007**

ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್–ಬಿ ವೃಂದದ ಅಧಿಕಾರಿಗಳ (ಬೋಧಕ ವೃಂದ) 9ನೇ ಬ್ಲಾಕ್ ನ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾದ ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 238 ಡಿಪಿಐ 1999, ದಿನಾಂಕ:27.06.2006ಕ್ಕೆ ಈ ಕೆಳಕಂಡಂತೆ ಅನುಬಂಧದಲ್ಲಿರುವಂತೆ ತಿದ್ದುಪಡಿ ಮಾಡಿ ಆದೇಶಿಸಿದೆ.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಗ್ರೂಪ್–ಬಿ (ಬೋಧಕ) ವೃಂದದ ಅಧಿಕಾರಿಗಳ ದಿನಾಂಕ:11.10.1984 ರಿಂದ 13.01.1994 ರವರೆಗಿನ ಅವಧಿಯಲ್ಲಿ ಮುಂಬಡ್ತಿ / ನೇರ ನೇಮಕಾತಿ ಹೊಂದಿದ ಅಧಿಕಾರಿಗಳ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿ**
**(ದಿನಾಂಕ:14.12.1987ರ ಆದೇಶ ಸಂಖ್ಯೆ: ಡಿಪಿಎಆರ್ 43 ಎಸ್‌ಆರ್‌ಇ 87 ರನ್ವಯ ತಯಾರಿಸಿದೆ)**

| ಕ್ರಮ ಸಂಖ್ಯೆ | ಘಟಕ | ಎಸ್.ಎಸ್.ಎ. ಗ್ರೇಡೇಷನ್ ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ/ ಬಡ್ತಿ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 664 | G | 2284 | ಕುಮಾರಸ್ವಾಮಿ ಬಿ.ಟಿ. | 15.08.1952 | 29.10.1996 | 30.09.1990 | ಎಸ್.ಸಿ. |

| 1 | 2 | 3 | 4 | 5 | 6 | 7 | 8 |
|---|---|---|---|---|---|---|---|
| 64–ಎ | G | 2286 | ಎನ್.ಡಿ.ಸಾಲಿ | 12.06.1952 | 29.10.1996 | 30.06.1990 | ಎಸ್.ಸಿ. |
| 665 | G | 2289 | ಗಾಮನಗಟ್ಟಿ.ಎಸ್.ಬಿ. | 01.06.1951 | 29.10.1996 | 30.06.1990 | ಎಸ್.ಸಿ. |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಂ. ಹಿರೇಮಠ,**
ಪಿ.ಆರ್.1570 ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

**IN THE COURT OF THE AUTHORIZED OFFICER AND DEPUTY CONSERVATOR OF FORESTS, BIDAR FOREST DIVISION, BIDAR**

**Crime No.58/2005, Dated:25.05.2005 of Aurad P.S. Aurad.**

**Complainant:** The State of Karnataka
represented by P.S.I. Aurad P.S.
aurad taluka, Bidar District.

**Respondent:** 1. Jayadrath S/o Uttamrao Zadke,
Age: 27 years
R/o Rajpur Tq: Yeona, Dist: Nasik.

**BRIEF FACTS ON WHICH THE ORDER IS BASED-**

1. On 25.05.2005, the P.S.I., Aurad (B) along with his police staff while doing night petrolling in Police Jeep No. KA-38, G-136, got a message that a person named Venkat, native of Aurad (B) was transporting Sandalwood in his Motor cycle and was driving along the same road. As they chased the motor cycle, two persons ran-way leaving the motor cycle No.MH-15, BC-8916 near mamadapur cross road. The police staff identified one accused as Venkat S/o Tukaram. While the box of the motor cycle was examined they found out some pieces of Sandalwood inside. Panchanama was drawn in presence of two witnesses (Panchas) namely Sri Ramesh S/o Kasaya & Sri Suryakanth S/o Charnappa and the motor cycle along with 2.5 Kg Sandalwood was seized. The Police registered the offence No.58/05 under section 86, 87 of KFA Act and under section 379 of IPC. The Police produced the accused in JFMC Court, Aurad. The seized 2.5 kg sandalwood was given to the custody of RFO, Aurad on 01.07.2005 and the seized vehicle was produced before the Authorized Officer and DCF, Bidar on 24.01.2006.

On 09.11.2005 and on 16.09.2006 the owner of Bajaj Motor Cycle No.MH-15,BC-8916, Sri Jayadrath S/o Uttamrao Zadke, R/o Rajpur, Dist: Yeona (Maharastra State) through his advocates filed application for interim custody of the vehicle. His plea was rejected by the Authorized Officer and Deputy Conservator of Forests, Bidar on 03.03.2006 after careful examination of the arguments made by learned advocate of applicant side and also written arguments of Prosecution on behalf of Govt. His plea for interim custody of the vehicle was also rejected by the Hon'ble Session Court (First Track Court-II), Bidar on 07.10.2005.

For concluding the above case, the confiscation proceeding under secion 71(A) of KFA 1963 was started on 24.02.2006 and closed on 03.08.2007. On behalf of prosecution, Mr. R.L. Rathod, ADP Bidar and Mrs Anjanna Chawan, ADP, Bidar and on behalf of the vehicle owner Advocate Mr.Prabhurao Tarnalli, Advocate Bidar argued the case.

Witnesses examined during the enquiry are:

On behalf of Prosecution : 1) Mr. Sambanna S/o basappa- (PW-1)
Police Constable No.1420, Aurad P.S.
2) Mr. T. Somla Naik,
PSI, Choubara P.S. Bidar (Earlier PSI Aurad PS)-PW2
3) Mr. Suryakanth S/o Sharnappa Jeep Driver Narayanpur (Aurad-B) -PW-3
4) Sri Ramesh S/o Kasaya Swami, Jeep Driver, Naganpalli (Aurad)-PW-4

On behalf of Defenses :1) Sri Venkat S/o Tukaram, Labour worker Aurad (B)-DW-1)
2) Sri Jayadrath S/o Uttamrao Rajpur, Yeona Tq: (Nasik)-DW-2
3) Sri Ramanna S/o Nagappa Social Worker Near Gandhi Chowk, Aurad-DW-3.

The exhibits have been marked as ExP1, ExP1 (a), ExP1(b), Pw1, Pw2, Pw3, Pw4 from prosecution side and Dw1, Dw2, & Dw3 from defense side.

The arguments and counter arguments from both prosecution and defense sides were heard. within the frame work of law in case of this case naturally the following questions arise-

I. Whether the Motor Cycle No.MH-15, BC-8916 was loaded with 2.5kg Sandalwood belonging to Govt. and whether it was illegal as per KFA Act & Rules?

II. Whether show-cause notices were issued to the concerned including registered owner of the vehicle giving him adequate opportunity for hearing as per of section 71(B) of KFA?

III. Whether the owner has proved that the vehicle was used to commit alleged offence without his knowledge or connivance and also without knowledge of his agent and of person incharge of the said vehicle and that each of them had taken all reasonable precautions against such use as per sub section (2) of section 71(B) of KFA?

IV. Whether the said seized vehicle along with the forest produce can be confiscated to Govt.?

After examining the arguments of both the sides and based on available documents, the above questions are replied as below:

I. yes

II. yes

III. yes

IV. yes in case of Sandalwood and No in case of the vehicle.

**Reasons**

**Part-I**

In replaying to the questions of examination in chief, the prosecution witness PW1 (Sambanna) and PW2 (Somla Naik) stated that Bajaj Boxer Motor cycle bearing No. MH-15, BC-8916 was seized along with about 2.5 k Sandalwood near Mamadapur cross road in presence of two witnesses (PW3 and PW4) after drawing Mahajar marked as ExP1. They came to know that one of the accused in the Motor cycle who absconded in dark was Mr. Venkat. PW2 in his statement said that the other accused could not be identified. PW1 while cross eamined by the defense stated that he saw Mr. Venkat for the first time during the enquiry. He also stated that it was difficult to say who drived the motor cycle and who was sitting behind it due to darkness. PW1 and PW2 both stated that they came across the offence at night while petrolling on 25.05.2005.

While examined by the prosecution, PW3 stated that about 2 years back the police driver called him when he was waiting at Aurad Bus Stand and took his signature in a paper at about 11.30 AM or 12 Noon. He identified his signature in the Panchanama as ExP1(a). He stated that Police did not seize any vehicle in front of him and he denied all the content of the Panchanama (Exp1) about the seizure of the vehicle and Sandalwood in from of him.

While examined by Prosecution, PW4 (Ramesh) stated that he was not called by the police to draw any Mahajar. 2-3 years back at about 2.00 PM, the Police took his signature (identified as Exp1 (b) in the Mahajar near Govt. school while he was waiting at the Aurad Bus Stand. Neither vehicle nor any wood was seized in front of him. He also denied the contents of the Mahajar.

DW1 (Venkat) while examined by the defense, he stated that 1 year back the police called him to the police station for doing some labour work. He stated that the police booked him as accused in this case to trouble him. He stated that the police lifted the vehicle from the vicinity of Ramanna's house and sandal was kept inside the motor cycle box. While cross examined by the prosecution, he stated that he was unaware of why he was connected as an accused in this case.

While examined by prosecution, DW2 (Jayadrath) claimed the Motor cycle No.MH-15, BC-8916 as owner. He stayed the night on 25.05.2005 at Ramanna's house parking the vehicle outside. Next day morning when he did not see his vehicle, went to Aurad P.S. to lodge complaint and saw the vehicle

there. While requested to release the vehicle he was told by the police to get release from the Court. He denined that he gave the vehicle to Mr. Venkat. He was unaware about the seizure of the vehicle in connection to Sandalwood which he knew in the Court only. He denied that he along with Venkat involved in Sandalwood Smuggling. He denied that his vehicle was seized near Mamadapur cross road.

After careful observation from the statements of PW1 & PW2, it has been observed that even though, both of them claimed that the vehicle along with 2.5 Kg sandalwood was seized at night on 25.05.2005 in presence of two witnesses (PW3 & PW4), both the witnesses denied that the vehicle and the Sandalwood were sized in front of them at night on 25.05.2005. They stated that the police took their signature during day time near Aurad Bus Stand. It shows the doubt regarding the loading of the Sandalwood in to the said vehicle. Even the statements of the PW3 and PW4 are difficult to believe how they signed without knowing the reasons for signing and about the contents in the paper. Since there is no proof that the sandalwood pieces were stolen from private land or purchased from market, the sandalwood must be the Government property as per section 84, KFA, 1963. Even though, the location of the vehicle from where it was seized not clear from the statements of both the parties, but association of sandalwood with the vehicle can not be denied. Therefore, the reply to the first part of the question is affirmative.

**Part-II**

Notices were issued to the vehicle owner to appear on 24.02.2006, 03.03.2006, 17.03.2006, 05.05.2006, 07.09.2006, 16.09.2006, 22.09.2006, 13.10.2006, 03.11.2006, 10.11.2006, 17.11.2006, 24.11.2006, 27.07.2007 and 03.08.2007 Thus the case was heard for 14 days of effective sittings for the purpose of giving sufficier opportunity for hearing as per section 71(B) of KFA, 1963. Therefore reply to the second part of the question is also affirmative.

**Part-III**

The vehicle Owner Sri Jaydrath stated that, he stayed the night on 25.05.2005 in Ramanna's house parking outside. DW-1 and DW-3 also denied that sri Jaydrath was involved in transporting and smuggling of Sandalwood. In the statements of PW-1 and PW-2 also, there was no mention that they saw Jaydrath during chasing the vehicle, even though they claimed that some of their staff swa Mr. Venkat running away leaving the vehicle. There is no any clue from PW3 and PW4 about involvement of Jayadrath with sandalwood smuggling in this case. Therefore, it may be concluded that Jaydrath was innocent about the involvement of Sandalwood with his Motor Cycle. Hence, the reply to the 3rd question is negative.

**Part-IV**

Since the Sandalwood was not proved whether it was brought from the private owner or from the market, it is established that it is a Government property as per Sec 84 of KFA 1963. Therefore it may be confiscated to the Government. Regarding the vehicle, the vehicle owner showed his unawareness about the seizure of the vehicle in connection to Sandalwood about which he came to know in the Court only. There is no direct proof that the vehicle owner was involved in laoding & transporting the Sandalwood in his vehicle. Hence the reply to the fourth question in relation to the sandalwood is affirmative and in relation to the vehicle is negative.

Therefore under the above circumstances, the following order has been passed.

**ORDER**

In the exercise of the authority vested in me vide Section 71 of the Karnataka Forest Act 1963, having followed the procedure prescribed in Section 71B of the said Act, I, Sri Dilip Kumar Das, I.F.S., Authorized Officer and Deputy Conservator of Forests, Bidar Forest Division, Bidar, do confiscate the 2.5 Kg Sandalwood in favour of the Government of Karnataka and have ordered for relaeasing the motor cycle No.MH-15, BC-8916 to the owner.

**DILIP KUMAR DAS I.F.S**
Authorized Officer and
Deputy Conservator of Forests, Bidar Forest
Division, Bidar.

PR-1571

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು, ನಂ.146, 3ನೇ ಮುಖ್ಯ ರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು-3 ರವರ ಕಾರ್ಯಾಲಯ:**

**ಕ್ರ.ಸಂ.ಡಿಆರ್‌ಬಿ-1/ ಸಮಾಪನೆ/ ಪು/ 45/ 2006-2007, ದಿನಾಂಕ:4ನೇ ಡಿಸೆಂಬರ್, 2007**

**ವಿಷಯ:** ಸಮಾಪನೆಯಲ್ಲಿರುವ ಶ್ರೀಶಕ್ತಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ., ವಿಜಯನಗರ, 2ನೇ ಹಂತ, ಬೆಂಗಳೂರು-40 ಈ ಸಹಕಾರ ಸಂಘವನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಕ್ರ.ಸಂಖ್ಯೆ: ಡಿಆರ್‌ಬಿ-1: ಸಮಾಪನೆ/ 07/ 2006-07 ದಿನಾಂಕ:20.05.2006.

2) ಶ್ರೀ ವೈ.ಎನ್. ರಾಮಯ್ಯ ಮತ್ತು ಇತರೆಯವರು ಸಹಕಾರ ಅಭಿವೃದ್ಧಿ ಅಧಿಕಾರಿ ಬೆಂಗಳೂರು ಉತ್ತರ ತಾಲ್ಲೂಕ ರವರ ಮುಖಾಂತರ ಸಲ್ಲಿಸಿರುವ ಮನವಿ, ದಿನಾಂಕ:23.10.2007.

3) ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ಹಾಗೂ ಸಮಾಪನಾಧಿಕಾರಿ, ಶ್ರೀಶಕ್ತಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು ಇವರ ಪತ್ರ ಕ್ರ.ಸಅಅ/ ಬೆಂ.ಉ.ತಾ/ 25/ 2007-08, ದಿನಾಂಕ:23.11.2007.

**ಪ್ರಸ್ತಾವನೆ:**

ಶ್ರೀಶಕ್ತಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ನಿ., ನಂ.13355/ಬಿ, 4ನೇ ಕ್ರಾಸ್, 9ನೇ ಮುಖ್ಯರಸ್ತೆ, ವಿಜಯನಗರ, 2ನೇ ಹಂತ, ಬೆಂಗಳೂರು-40. ಈ ಸಹಕಾರ ಸಂಘವು ಕಾರ್ಯಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಈ ಸಂಘವನ್ನು ಮುಂದುವರಿಸುವುದು ಸೂಕ್ತವಲ್ಲವೆಂದು ಮನಗಂಡು ಸಮಾಪನೆಗೊಳಿಸಲು ತೀರ್ಮಾನಿಸಿದೆ. ಸಮಾಪನೆಗೊಳಿಸಲು ಅಂತಿಮ ತೀರ್ಮಾನ ಕೈಗೊಳ್ಳಲು ಮೊದಲು ಸ್ವಾಭಾವಿಕ ನ್ಯಾಯ ತತ್ವಗಳನ್ವಯ ಸಂಬಂಧಪಟ್ಟವರಿಗೆ ಈ ಕಛೇರಿಯಿಂದ ದಿನಾಂಕ:20.05.2006ರಂದು ನೋಟೀಸ್ ಕಳುಹಿಸಲಾಗಿತ್ತು. ಆದಾಗ್ಯೂ ಯಾವುದೇ ಆಕ್ಷೇಪಣೆ ಕಛೇರಿಗೆ ಸ್ವೀಕೃತವಾಗದ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಉಲ್ಲೇಕ (1)ರಂತೆ ಸಮಾಪನೆಗೊಳಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಉತ್ತರ ತಾಲ್ಲೂಕು ರವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕಾತಿ ಮಾಡಲಾಗಿತ್ತು. ಹಿಂದಿನ ಸಮಾಪನಾಧಿಕಾರಿಯವರು ಪ್ರಭಾರವನ್ನು ವಹಿಸಿಕೊಂಡಿರಲಿಲ್ಲವೆಂದು ಈಗಿನ ಸಮಾಪನಾಧಿಕಾರಿಯವರು ದಿನಾಂಕ:20.11.2007ರಂದು ಪ್ರಭಾರವಹಿಸಿಕೊಂಡಿರುತ್ತಾರೆ.

ಈ ಮಧ್ಯೆ ಶ್ರೀ ವೈ.ಎನ್. ರಾಮಯ್ಯ ಮತ್ತು ಇತರೆಯವರು ಸಮಾಪನಾಧಿಕಾರಿಯವರಿಗೆ ಒಂದು ಮನವಿ ಸಲ್ಲಿಸಿ ಪ್ರಸ್ತಾವನೆಯಲ್ಲಿ ಸಂಘದ ಸದಸ್ಯರುಗಳ ಅಸಹಕಾರದಿಂದ ಈ ಹಿಂದೆ ಸಂಘದ ವಹಿವಾಟು ಸ್ಥಗಿತಗೊಂಡಿದ್ದು, ಸಂಘವನ್ನು ಸಮಾಪನೆಗೊಳಿಸಲಾಗಿತ್ತೆಂದು, ಪ್ರಸ್ತುತ ಸದಸ್ಯರುಗಳೆಲ್ಲಾ ಒಟ್ಟಾಗಿ ಸೇರಿ ಸಂಘವನ್ನು ನಿಯಮಾನುಸಾರ ನಡೆಸಿಕೊಂಡು ಹೋಗಲು ಉತ್ಸಾಹಿಗಳಾಗಿರುವುದಾಗಿ ತಿಳಿಸಿ ಸದಸ್ಯರುಗಳ ಆರ್ಥಿಕ ಅಭಿವೃದ್ಧಿಗೆ ಅನುಕೂಲವಾಗುವುದಾಗಿ ತಿಳಿಸಿ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿರುತ್ತಾರೆ. ಅದರಂತೆ ಸಮಾಪನಾಧಿಕಾರಿಗಳು ದಿನಾಂಕ:22.11.2007ರಂದು ನಡೆಸಿದ ನಡವಳಿಯಲ್ಲಿ ಸಂಘವನ್ನು ಪುನಃಶ್ಚೇತನಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸಂಘದ ಸದಸ್ಯರುಗಳು ಹಾಗೂ ಸಮಾಪನಾಧಿಕಾರಿಯವರು ಸಲ್ಲಿಸಿರುವ ವರದಿಯನ್ನು ಹಾಗೂ ದಿನಾಂಕ:31.03.2007ರ ಅಂತ್ಯಕ್ಕೆ ಇರುವಂತೆ ತಯಾರಿಸಿರುವ ತಾತ್ಕಾಲಿಕ ಆಸ್ತಿ ಜವಾಬ್ದಾರಿ ತಃಖ್ತೆಯನ್ನು ಪರಿಶೀಲಿಸಲಾಗಿ ಸದಸ್ಯರುಗಳಿಂದ ವಸೂಲಾತಿಗಾಗಿ ಬಾಕಿಯಿರುವ ಜಾಮೀನು ಸಾಲ ರೂ.2,37,500/-ಗಳು ಬರಬೇಕಾಗಿದ್ದು, ಆಡಳಿತ ಮಂಡಳಿಯನ್ನು ರಚಿಸಿದಲ್ಲಿ ಈ ಸಾಲದ ಬಾಕಿ ವಸೂಲಾತಿಗೆ ಹಾಗೂ ಸಂಘದ ಸದಸ್ಯರುಗಳ ಅಭಿವೃದ್ಧಿಗೆ ಯೋಜನೆ ರೂಪಿಸಲು ಅನುಕೂಲವಾಗುವುದೆಂದು ಹಾಗೂ ಸಂಘವು ಸ್ಥಾಪನೆಯಾದ ಉದ್ದೇಶಗಳ ಕಾರ್ಯ ಚಟುವಟಿಕೆಗಳನ್ನು ಮುಂದುವರಿಸಿಕೊಂಡು ಹೋಗಲು ಅವಕಾಶವನ್ನು ಕಲ್ಪಿಸಿಕೊಡುವ ಹಿನ್ನೆಲೆಯಲ್ಲಿ ಉಲ್ಲೇಖ (2)ರ ಸಮಾಪನಾ ಆದೇಶವನ್ನು ರದ್ದುಪಡಿಸಿ, ಕೆಲವು ಷರತ್ತಿಗೊಳಪಟ್ಟು ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(3) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ/ 69/ ಸಿಎಲ್‌ಎಂ/2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಎಂ. ವೆಂಕಟಸ್ವಾಮಿ, ಸಹಕಾರ ಸಂಘಗಳ ಉಪನಿಬಂಧಕರು-1 ಬೆಂಗಳೂರು ನಗರ ಜಿಲ್ಲೆ, ಆದ ನಾನು ಶ್ರೀಶಕ್ತಿ ಕ್ರೆಡಿಟ್ ಕೋ-ಆಪರೇಟಿವ್ ಸೊಸೈಟಿ ಲಿ., ಬೆಂಗಳೂರು-40, ಈ ಸಹಕಾರ ಸಂಘವನ್ನು ಕಲಂ 72(2) ರನ್ವಯ ಈ ಕಛೇರಿಯ ಆದೇಶ ಕ್ರಡಿಆರ್‌ಬಿ-1/ ಸಮಾಪನೆ 07/2006-07 ದಿನಾಂಕ:05.06.2006 ರಂತೆ ಸಮಾಪನೆಗೊಳಿಸಿರುವುದನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿರುತ್ತೇನೆ. ಹಾಗೂ ಸದರಿ ಸಹಕಾರ ಸಂಘವನ್ನು

ಈ ಕೆಳಕಂಡ ಷರತ್ತಿಗೊಳಪಟ್ಟು ಪುನಃಶ್ಚೇತನಗೊಳಿಸಿ ಈ ಮೂಲಕ ಆದೇಶಿಸಿರುತ್ತೇನೆ. ಸಂಘದ 2007–08 ರಿಂದ 2011–12ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಗೆ ನಿರ್ದೇಶಕರನ್ನು ಚುನಾಯಿಸಲು ಸಹಕಾರ ಸಂಘಗಳ ನಿಯಮ 11 ರನ್ವಯ ಚುನಾವಣೆಯನ್ನು ನಡೆಸಲು ಶ್ರೀ ಹೆಚ್.ಎಂ. ಅಪ್ಪಾಜಿಗೌಡ ಸಹಕಾರ ಅಭಿವೃದ್ಧಿ ಅಧಿಕಾರಿ, ಇವರಿಗೆ ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಯವರು ಸದರಿ ಸಂಘದ ಆಡಳಿತ ಮಂಡಳಿಗೆ ನಿಯಮಗಳ ಪ್ರಕಾರ ಚುನಾವಣೆಯನ್ನು ಜರುಗಿಸಿ ಈ ಕಛೇರಿಗೆ ವರದಿ ಮಾಡುವಂತೆ ಆದೇಶಿಸಲಾಗಿದೆ.

**ಷರತ್ತುಗಳು**

1) ಸಂಘದ ಕಾರ್ಯಚಟುವಟಿಕೆಗಳು ಹಾಗೂ ವ್ಯವಹಾರಗಳನ್ನು ಸಹಕಾರ ಸಂಘಗಳ ಕಾನೂನು ಮತ್ತು ಸಂಘದ ಉಪ ನಿಯಮಗಳ ಪ್ರಕಾರ ಕೂಡಲೇ ಪ್ರಾರಂಭಿಸತಕ್ಕದ್ದು.

2) ಸಂಘದ ದುಡಿಯುವ ಬಂಡವಾಳವನ್ನು ಷೇರು ಹಣ ಸಂಗ್ರಹಿಸುವ ಮೂಲಕ ಹೆಚ್ಚಿಸಿಕೊಳ್ಳುವುದು.

3) ಸಂಘದ ಸದಸ್ಯರುಗಳ ಆರ್ಥಿಕ ಅಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಆರ್ಥಿಕವಾಗಿ ಸದೃಢಗೊಳಿಸಿಕೊಳ್ಳುವುದು.

4) ಸಂಘದ ಉಪನಿಯಮಗಳಲ್ಲಿರುವ ಉದ್ದೇಶಗಳಿಗನುಗುಣವಾಗಿ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು.

5) ಕರ್ನಾಟಕ ಸಹಕಾರ ಸಂಘಗಳ ನಿಯಮ 17ರಂತೆ ಸಂಘದ ಸಿಬ್ಬಂದಿಯ ವೃಂದಬಲ ಮತ್ತು ವೇತನ ಶ್ರೇಣಿಗಳನ್ನು ಇಲಾಖೆಯಿಂದ ಅನುಮೋದನೆ ಪಡೆಯತಕ್ಕದ್ದು.

6) ಸಂಘವು ಸಹಕಾರ ಸಂಘಗಳ ಕಾಯ್ದೆಯ ಕಲಂ 29ಜಿ (6) ರನ್ವಯ ಈ ಕಛೇರಿಗೆ ಸಲ್ಲಿಸಬೇಕಾದ ಮಾಹಿತಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

7) ಸಂಘದ ಲೆಕ್ಕಪತ್ರಗಳನ್ನು ಲೆಕ್ಕ ಪರಿಶೋಧನಾ ಇಲಾಖೆಯಿಂದ ಕೂಡಲೇ ಆಡಿಟ್ ಮಾಡಿಸತಕ್ಕದ್ದು.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ:04.12.2007ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು–1,
ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು.

ಪಿ.ಆರ್.1572

## ಲೋಕೋಪಯೋಗಿ ಇಲಾಖೆ

## ರಾಷ್ಟ್ರೀಯ ಹೆದ್ದಾರಿಗಳು

## ಕಾರ್ಯಪಾಲಕ ಅಭಿಯಂತರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಪ್ರಕಟಣೆ

**ಸಂಖ್ಯೆ: ರಾಹೆವಿ/ ಮಂ/ ಕಾಅ/ ಅಧಿಸೂಚನೆ/ 2007–08/ 3376, ದಿನಾಂಕ:20ನೇ ನವೆಂಬರ್, 2007**

ರಾಷ್ಟ್ರೀಯ ಹೆದ್ದಾರಿ–63 ಅಂಕೋಲ–ಗುತ್ತಿ ಸೆಕ್ಷನ್‌ನ ಹೊಸಪೇಟೆ ಪಟ್ಟಣದ ಹೊರವಲಯದಿಂದ ಕಾಗಿಗನೂರು ಗ್ರಾಮ ಪರಿಮಿತಿಯಲ್ಲಿನ ಅಂದರೆ ಕಿ.ಮೀ. 284.00 ರಿಂದ ಕಿ.ಮೀ.287.00ರ ಭಾಗದಲ್ಲಿ ಸಿಮೆಂಟ್ ಕಾಂಕ್ರೀಟ್ ರಿಜಿಡ್ ಪೇವ್‌ಮೆಂಟ್ ಕಾಮಗಾರಿ ಟಿ. ಜಂಕ್ಷನ್ ಅಭಿವೃದ್ಧಿ ಕಾಮಗಾರಿ ಹಾಗೂ ಕಿರು ಸೇತುವೆ ನಿರ್ಮಾಣ ಕಾಮಗಾರಿಗಳನ್ನು ತುರ್ತಾಗಿ ಕೈಗೊಳ್ಳಬೇಕಾಗಿರುತ್ತದೆ. ಈ ಕಾಮಗಾರಿಗಳನ್ನು ಸದರಿ ರಾಷ್ಟ್ರೀಯ ಹೆದ್ದಾರಿಯಲ್ಲಿ ಸಂಚರಿಸುತ್ತಿರುವ ವಾಹನಗಳ ದಟ್ಟಣೆ ಸಂಚಾರದಿಂದ ಕೈಗೊಳ್ಳಲು ಸಾಧ್ಯವಾಗುತ್ತಿಲ್ಲ. ಹಾಗೂ ಗ್ರಾಮ ಪರಿಮಿತಿಯಲ್ಲಿ ಈ ಕಾಮಗಾರಿಗಳನ್ನು ಕೈಗೊಳ್ಳಬೇಕಾಗಿರುತ್ತದೆ. ಈ ಕಾರಣಗಳಿಂದ ರಾಷ್ಟ್ರೀಯ ಹೆದ್ದಾರಿ–63 ಕಿ.ಮೀ. 284.00 ರಿಂದ 287.00 ರ (ಹೊಸಪೇಟೆಯಿಂದ ಕಾರಿಗನೂರು ಗ್ರಾಮ) ಭಾಗದ ರಸ್ತೆಯನ್ನು ಅಭಿವೃದ್ಧಿಪಡಿಸುವ ಸಲುವಾಗಿ, ಶ್ರೀ ಡಿ.ಆರ್. ಮಂಜುನಾಥ, ಕಾರ್ಯಪಾಲಕ ಇಂಜಿನಿಯರ್ ಹಾಗೂ ಹೆದ್ದಾರಿ ಆಡಳಿತ, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ, ಆದ ನಾನು ಕೇಂದ್ರ ಸರ್ಕಾರದ ರಾಷ್ಟ್ರೀಯ ಹೆದ್ದಾರಿ ಕಾಯ್ದೆ 2002ರ ಕಲಂ 31(1), (2), 32 ಮತ್ತು 33ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ರಾಷ್ಟ್ರೀಯ ಹೆದ್ದಾರಿ–63ರ ಕಿ.ಮೀ.284.00 ರಿಂದ 287.00 ರವರೆಗಿನ ಹೆದ್ದಾರಿಯಲ್ಲಿ ಸಂಚರಿಸುವ ಎಲ್ಲಾ ವಾಹನಗಳ ಸಂಚಾರವನ್ನು ನಿಷೇಧಿಸಲು ಉದ್ದೇಶಿಸಿದ್ದೇನೆ. ಈ ಬಗ್ಗೆ ಏನಾದರೂ ಆಕ್ಷೇಪಣೆ ಇದ್ದಲ್ಲಿ ಈ ಪ್ರಕಟಣೆ ದಿನಾಂಕದಿಂದ 8 ದಿನದೊಳಗಾಗಿ ಅಂದರೆ 29.11.2007ರ ಒಳಗಾಗಿ ಕೆಳಗೆ ಸಹಿ ಮಾಡಿರುವವರಲ್ಲಿ ನೀಡಬೇಕು. ತದನಂತರ ಬರುವ ಯಾವುದೇ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲ ಹಾಗೂ ತಿರಸ್ಕರಿಸಲಾಗುವುದು.

ಕಾರ್ಯಪಾಲಕ ಇಂಜಿನಿಯರ್ ಮತ್ತು ಹೆದ್ದಾರಿ
ಆಡಳಿತ, ರಾಷ್ಟ್ರೀಯ ಹೆದ್ದಾರಿ ವಿಭಾಗ,
ಚಿತ್ರದುರ್ಗ.

ಪಿ.ಆರ್.1499

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಕಾನಪ:413:07/750, ದಿನಾಂಕ:19ನೇ ಅಕ್ಟೋಬರ್, 2007**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಶ್ರೀಮತಿ ಗಂಗಮ್ಮ ಗಂ: ಹೆಚ್.ಮಾರೆಪ್ಪ ವಯಸ್ಸು:48 ವರ್ಷ.
2) ನಾಗರತ್ನಮ್ಮ ತಂದೆ: ಲೇಟ್ ಹೆಚ್. ಮಾರೆಪ್ಪ, ವಯಸ್ಸು 28 ವರ್ಷ.
3) ಮಾರೆಕ್ಕ ತಂ: ಲೇಟ್ ಹೆಚ್.ಮಾರೆಪ್ಪ ವಯಸ್ಸು:26 ವರ್ಷ:
4) ಮೂಕನ್ನೇಶ್ವರ ತಂ: ಲೇಟ್ ಹೆಚ್.ಮಾರೆಪ್ಪ, ವಯಸ್ಸು:23 ವರ್ಷ.
5) ನಾಗಲಕ್ಷ್ಮಿ ತಂ: ಲೇಟ್ ಹೆಚ್. ಮಾರೆಪ್ಪ ವಯಸ್ಸು: 20 ವರ್ಷ.
6) ಶೋಭಾ ತಂ: ಲೇಟ್ ಹೆಚ್. ಮಾರೆಪ್ಪ ವಯಸ್ಸು: 18 ವರ್ಷ.
**ಎಲ್ಲಾರ ವಾಸ:** ಸುಬ್ಬರಾಯನಹಳ್ಳಿ, ಸಂಡೂರು (ತಾ), ಬಳ್ಳಾರಿ (ಜಿ).

ದಿ. ಜನರಲ್ ಮ್ಯಾನೇಜರ್, ಸ್ಮಯೂರ್, ದೇವಗಿರಿ, ಸಂಡೂರು (ತಾ:) ಬಳ್ಳಾರಿ (ಜಿ).

**ಪ್ರಕಟಣೆ**

ಸದರಿ 1ನೇ ಅರ್ಜಿದಾರಳು ಮೃತ ಹೆಚ್. ಮಾರೆಪ್ಪನವರ ಪತ್ನಿಯೆಂದು, 2,3,5 ಮತ್ತು 6ನೇ ಅರ್ಜಿದರರು ಮೃತನ ಮಕ್ಕಳಾಗಬೇಕೆಂದು ಹಾಗೂ 4ನೇ ಅರ್ಜಿದಾರ ಮೃತನ ಮಗನಾಗಬೇಕೆಂದು ಹಾಗೂ ಅವಲಂಬಿತರು ಎಂದು ಮೃತನ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹೆಚ್. ಮಾರೆಪ್ಪ ಪ್ರತಿವಾದಿಗಳ ಬಳಿ ಸೀನಿಯರ್ ಪಂಪ್ ಆಪರೇಟರ್ ಆಗಿ ದಿನಾಂಕ:24.06.2007 ರಂದು 2ನೇ ಶಿಫ್ಟ್ ಡ್ಯೂಟಿ ಮಧ್ಯಾಹ್ನ 2.00 ಗಂಟೆಯಿಂದ ರಾತ್ರಿ 10.00 ಗಂಟೆವರೆಗೆ ಕೆಲಸದಲ್ಲಿ ನಿರತನಾಗಿದ್ದಾಗ ಪಂಪ್‌ಹೌಸ್‌ನಲ್ಲಿ ಅಪಘಾತವಾಗಿ ಮೃತಹೊಂದಿರುತ್ತಾನೆಂದು ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.1380

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ–1, ಬಳ್ಳಾರಿ**
**ಕಾನಪ:354:07/728, ದಿನಾಂಕ:18ನೇ ಅಕ್ಟೋಬರ್, 2007**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1) ಕೆ. ಶಂಭುಲಿಂಗಪ್ಪ ಅಲಿಯಾಸ್ ಶಂಭಪ್ಪ ತಂ: 55 ವರ್ಷ (ಮೃತನ ತಂದೆ)
2) ಶ್ರೀಮತಿ ಭೀಮಕ್ಕ ಗಂ: ಕೆ. ಶಂಭುಲಿಂಗಪ್ಪ ಅಲಿಯಾಸ್ ಶಂಭಪ್ಪ: ವ: 50ವರ್ಷ, (ಮೃತನ ತಾಯಿ) 3) **ಎಲ್ಲರ ವಾಸ:** ಸಿರಿಗೇರಿಗ್ರಾಮ, ಸಿರುಗುಪ್ಪ (ತಾ) ಬಳ್ಳಾರಿ (ಜಿ).

1) ವಿಧ್ಯಾಸಾಗರ್ ತಂ: ವೆಂಕಟೇಶ್ವರರಾವ್, ವ್ಯವಸಾಯಗಾರರು, ಕುರುಗೋಡು ರೋಡ್, ಸಿರಿಗೇರಿಗ್ರಾಮ, ಸಿರುಗುಪ್ಪ (ತಾ), ಬಳ್ಳಾರಿ ಜಿಲ್ಲೆ.
2) ಮಹಾಲಿಂಗನಗೌಡ ತಂ:ಜಂಬನಗೌಡ, ವ್ಯವಸಾಯಗಾರರು, 2ನೇ ವಾರ್ಡ್ ಕುಂಬಾರ ಓಣಿ, ಸಿರಿಗೇರಿ, ಸಿರುಗುಪ್ಪ (ತಾ) ಬಳ್ಳಾರಿ (ಜಿ).

**ಪ್ರಕಟಣೆ**

ಕೆ. ಶಂಭುಲಿಂಗಪ್ಪ ಅಲಿಯಾಸ್ ಶಂಭಪ್ಪ ಹಾಗೂ ಶ್ರೀಮತಿ ಭೀಮಕ್ಕ ಗಂ: ಶಂಭುಲಿಂಗಪ್ಪ ಅಲಿಯಾಸ್ ಶಂಭಪ್ಪ ವಾಸ: ಸಿರಿಗೇರಿ ಗ್ರಾಮ, ಸಿರುಗುಪ್ಪ (ತಾ), ಬಳ್ಳಾರಿಜಿಲ್ಲೆ ಇವರು ತಾವು ಮೃತ ಪಂಪಾಪತಿಯ ತಂದೆ–ತಾಯಿಗಳೆಂದು ಹಾಗೂ ಅವಲಂಬಿತರೆಂದು ಅವರು ತಮ್ಮ ಮಗ ಮೃತ ಪಂಪಾಪತಿಯ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಪಂಪಾಪತಿ ದಿನಾಂಕ:15.06.2007ರಂದು 2ನೇ ಪ್ರತಿವಾದಿಗಳ ಹೊಲದಲ್ಲಿ ಕೂಲಿಯಾಗಿ ಕೆಲಸ

ಮಾಡುತ್ತಿದ್ದಾಗ 1ನೇ ಪ್ರತಿವಾದಿಯ ಭೂಮಿಯ ಕಡೆ ಹಾರಲು ಹೋಗಿ ಫೆನ್ಸಿಂಗ್ ಬಡಿದ ಪರಿಣಾಮ ಮೃತಪಟ್ಟಿರುತ್ತಾನೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ-1, ಬಳ್ಳಾರಿ.

ಪಿ.ಆರ್.1381

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಬಳ್ಳಾರಿ**
**ಕಾನಪ:325:07/740, ದಿನಾಂಕ:18ನೇ ಅಕ್ಟೋಬರ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಲಿಂಗಯ್ಯ ಅಲಿಯಾಸ್ ಮ್ಯಾಗಳ ಓಣಿ ಲಿಂಗಪ್ಪ, ತಂ: ಸಣ್ಣ ವೀರಬದ್ರಪ್ಪ, ವ:48ವರ್ಷ (ಮೃತಳ ಗಂಡ)<br>2) ವೀರಬದ್ರ ತಂ: ನಿಂಗಯ್ಯ, ವಯಸ್ಸು:17 ವರ್ಷ (ಮೃತಳ ಮಗ)<br>3) ರಮೇಶ್ ತಂ: ನಿಂಗಯ್ಯ, ವ:10 ವರ್ಷ (ಮೃತಳ ಮಗ)<br>4) ರೇಣುಕಮ್ಮ ತಂದೆ: ನಿಂಗಯ್ಯ, ವ:2 ವರ್ಷ (ಮೃತಳ ಮಗಳು) ಎಲ್ಲರ ವಾಸ: ಚಳ್ಳೆ ಕೊಡ್ಲೂರು, ಸಿರಲಗುಪ್ಪ (ತಾ), ಬಳ್ಳಾರಿ (ಜಿ). | | 1) ಶ್ರೀಮತಿ ಲಕ್ಷ್ಮೀದೇವಿ ಅಲಿಯಾಸ್ ಲಕ್ಷ್ಮಮ್ಮ ಗಂಡ: ಅಗಸನೂರು ಮೂಕಣ್ಣ ಅಲಿಯಾಸ್ ಸಣ್ಣ ಮೂಕಣ್ಣ, ಟ್ರಾಕ್ಟರ್-ಟ್ರೈಲರ್ ಮಾಲೀಕರು ಸಂಖ್ಯೆ: ಕೆಎ-34: ಟಿ-1002: 1003, ವಾಸ: ಚಳ್ಳೆ ಕೊಡ್ಲೂರು, ಸಿರುಗುಪ್ಪ (ತಾ) ಬಳ್ಳಾರಿ ಜಿಲ್ಲೆ. |

**ಪ್ರಕಟಣೆ**

ಲಿಂಗಯ್ಯ ಅಲಿಯಾಸ್ ಮ್ಯಾಗಳ ಓಣಿ ಲಿಂಗಪ್ಪ, (2) ವೀರಬದ್ರ, (3) ರಮೇಶ್ ಮತ್ತು ರೇಣುಕಮ್ಮ ಇವರು ತಾವು ಮೃತಳ ಗಂಡ ಹಾಗೂ ಅಪ್ರಾಪ್ತ ವಯಸ್ಕ ಮಕ್ಕಳೆಂದು ಮತ್ತು ಅವಲಂಭಿತರೆಂದು ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹಂಪಮ್ಮಳು ದಿನಾಂಕ:23.01.2007ರಂದು ಟ್ರಾಕ್ಟರ್-ಟ್ರೈಲರ್ ವಾಹನ ಸಂಖ್ಯೆ: ಕೆಎ-34: ಟಿ-1002:1003 ರಲ್ಲಿ ಕೂಲಿಯಾಗಿ ಕೆಲಸ ಮಾಡುತ್ತಿದ್ದಾಗ ಅಪಘಾತ ಸಂಭವಿಸಿ ಮೃತಪಟ್ಟಿರುತ್ತಾಳೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ-1, ಬಳ್ಳಾರಿ.

ಪಿ.ಆರ್.1382

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪವಿಭಾಗ-1, ಬಳ್ಳಾರಿ**
**ಕಾನಪ:324:07/738, ದಿನಾಂಕ:18ನೇ ಅಕ್ಟೋಬರ್, 2007**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಭೀಮಣ್ಣ ಅಲಿಯಾಸ್ ಸಿಂಗ್ರಿಭೀಮಣ್ಣ, ತಂದೆ: ಧ್ಯಾವಯ್ಯ<br>2) ರಂಗಮ್ಮ ತಂ: ಭೀಮಣ್ಣ<br>3) ರಂಗಣ್ಣ ತಂ: ಭೀಮಣ್ಣ<br>1 ರಿಂದ 3ರ ವರೆಗಿನ ಅರ್ಜಿದಾರರ ವಾಸ: ಚೆಳ್ಳೆ ಕಡ್ಲೂರು, ಸಿರುಗುಪ್ಪ (ತಾ), ಬಳ್ಳಾರಿಜಿಲ್ಲೆ. | | 1) ಶ್ರೀಮತಿ ಲಕ್ಷ್ಮೀದೇವಿ ಅಲಿಯಾಸ್ ಲಕ್ಷ್ಮಮ್ಮ ಗಂಡ: ಅಗಸನೂರ್ ಮೂಕಣ್ಣ ಅಲಿಯಾಸ್ ಸಣ್ಣ ಮೂಕಣ್ಣ ಟ್ರಾಕ್ಟರ್-ಟ್ರೈಲರ್ ಮಾಲೀಕರು<br>ವಾಹನ ಸಂ: ಕೆಎ-34: ಟಿ-1002-1003<br>ವಾಸ: ಚೆಳ್ಳೆಕಡ್ಲೂರು, ಸಿರುಗುಪ್ಪ (ತಾ), ಬಳ್ಳಾರಿ (ಜಿಲ್ಲೆ) |

**ಪ್ರಕಟಣೆ**

1) ಭೀಮಣ್ಣ ಅಲಿಯಾಸ್ ಸಿಂಗ್ರಿಭೀಮಣ್ಣ (ಮೃತಳ ಗಂಡ), 2) ಮೈನರ್ ರಂಗಮ್ಮ ತಂ: ಭೀಮಣ್ಣ 5 ವರ್ಷ, (ಮೃತಳ ಮಗಳು), 3) ಮೈನರ್ ರಂಗಣ್ಣ ತಂ: ಭೀಮಣ್ಣ, 3 ವರ್ಷ (ಮೃತಳ ಮಗ) ಎಲ್ಲರ ವಾಸ ಚಳ್ಳಿ ಕಡ್ಲೂರ್ ಆದ ತಾವು ಮೃತ ಶ್ರೀಮತಿ ನಿಂಗಮ್ಮಳ ಪತಿ ಹಾಗೂ ಅರ್ಜಿದಾರರು 2 ಮತ್ತು 3 ಮೈನರ್ ಮಕ್ಕಳಾಗಬೇಕೆಂದು ಹಾಗೂ ಅವಲಂಬಿತರು ಎಂದು ಮೃತಳ ಸಾವಿಗಾಗಿ ನಷ್ಟಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶ್ರೀಮತಿ ನಿಂಗಮ್ಮಳು ಪ್ರತಿವಾದಿಗಳ ಬಳಿ ಟ್ರಾಕ್ಟರ್ ಟ್ರೈಲರ್ ಸಂಖ್ಯೆ: ಕೆಎ–34:ಟಿ–1002–1003ರಲ್ಲಿ ಕೂಲಿಯಗಿ ಕೆಲಸ ಮಾಡುತ್ತಿದ್ದಾಗ ದಿನಾಂಕ:23.01.2007 ರಂದು ಬೆಳಿಗ್ಗೆ 8.00 ಗಂಟೆ ಸಮಯದಲ್ಲಿ ಮಾಲೀಕರ ಆದೇಶದಂತೆ ನೆಲ್ಲು ಸಸಿಲೋಡ್ ಮಾಡಿಕೊಂಡುಬರುತ್ತಿದ್ದಾಗ ಹಚುಚ್ಚಳ್ಳಿ ಗ್ರಾಮದ ಮಾಟುರು ರಸ್ತೆಯ ಸಣ್ಣ ನಾಗಪ್ಪನ ಹೊಲದ ಹತ್ತಿರ ಟ್ರಾಕ್ಟರ್––ಟ್ರೈಲರ್‌ವಾಹನ ಎಡಭಾಗಕ್ಕೆ ತಗ್ಗಿನಲ್ಲಿ ಬಿದ್ದಪರಿಣಾಮ ಮೃತಳ ಮೇಲೆ ಟ್ರಾಕ್ಟರ್–ಟ್ರಾಲಿ ಚಕ್ರಗಳು ಹಾದುಹೋಗಿ ಸ್ಥಳದಲ್ಲೇ ಮೃತಪಟ್ಟಿರುತ್ತಾಳೆಂದು ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರು ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ ಅಂತಹವರು ಪ್ರಕಟಣೆಯು ಈ ನ್ಯಾಯಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**
ಕಾರ್ಮಿಕಾಧಿಕಾರಿ ಮತ್ತು
ಕಾರ್ಮಿಕ ನಷ್ಟಪರಿಹಾರ ಆಯುಕ್ತರು,
ಬಳ್ಳಾರಿ ಉಪವಿಭಾಗ–1, ಬಳ್ಳಾರಿ.

ಪಿ.ಆರ್.1383

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು**

**ಕ್ರ.ಸಂ. ಎಆರ್ 31/ದಾವಾ/ ಅಮಲ್ಜಾರಿ/ 65/ 2007–08, ದಿನಾಂಕ:25ನೇ ಅಕ್ಟೋಬರ್, 2007**

**ವಿಷಯ:** ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀಮತಿ ಶಕುಂತಲಾ ಅಲಿಯಾಸ್ ಶೋಭಾ ಕೋಂ ಹೆಚ್. ರುದ್ರೇಶ್, 2ನೇ ಮೇನ್, 6ನೇ ಕ್ರಾಸ್, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಸಂಘದ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಅಡಿಯಲ್ಲಿ ವರ್ಗಾಯಿಸುವ ಬಗ್ಗೆ.

**ಉಲ್ಲೇಖ:** 1) ದಾವಾ ಸಂಖ್ಯೆ: 140/ 2003–04 ದಿನಾಂಕ:21.06.2002.
2) ಅಮಲ್ಜಾರಿ ಪ್ರಕರಣ ಸಂಖ್ಯೆ: 1539/ 2002–03.
3) ಮಾರಾಟಾಧಿಕಾರಿಗಳ ಪತ್ರದ ದಿನಾಂಕ:01.09.2007.
4) ಈ ಕಛೇರಿಯ ಸಮಸಂಖ್ಯೆಯ ಅಂತಿಮ ತಿಳುವಳಿಕೆ ಪತ್ರದ ದಿನಾಂಕ:13.09.2007.

**ಪ್ರಸ್ತಾವನೆ:**

ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಸಂಘದ ಸಾಲಗಾರರಾದ ಶ್ರೀಮತಿ ಶಕುಂತಲಾ ಅಲಿಯಾಸ್ ಶೋಭಾ ಕೋಂ ಹೆಚ್. ರುದ್ರೇಶ್, ದಾವಣಗೆರೆ ಇವರು ದಾವಣಗೆರೆ ಸಿ.ಟಿ. ನಿಟ್ಟುವಳ್ಳಿ ಗ್ರಾಮದ ಖಾತೆ ನಂ.115, ಮನೆ ನಂ.139/10 ಶಕ್ತಿ ಗ್ಯಾಸ್ ಹಿಂಭಾಗದಲ್ಲಿರುವ ಹೆಂಚಿನ ಮನೆಯ ಅಳತೆ 40x30 ಅಡಿಗಳ ಮನೆಯನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಸಂಘದವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 140/2002–03 ದಿನಾಂಕ:21.06.2002 ರಂದು ಒಟ್ಟು ರೂ.4,46,338.00ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 1539/2002–03 ನ್ನು ಕಲಂ 101ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಸಂಘಕ್ಕೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ:16.09.2004 ಮತ್ತು 16.08.2007ರಂದು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ ಪ್ರಯುಕ್ತ ಸದರಿ ಆಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ನಿಯಮ 38(2)ರ ಪ್ರಕಾರ ಮಾರಾಟವಾಗದ ಆಸ್ತಿ ಎಂದು ತೀರ್ಮಾನಿಸಿ, ಸಂಘದ ಕಾರ್ಯಕಾರಿ ಮಂಡಳಿಯ ತೀರ್ಮಾನದಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 101 ಬಿ ಪ್ರಕಾರ ಈ ಕೆಳಕಂಡ ಆಸ್ತಿಯನ್ನು ಸಂಘದ ಹೆಸರಿಗೆ ರೂ.4,46,338.00 ಗಳಿಗೆ ವರ್ಗಾಯಿಸಲು ತೀರ್ಮಾನಿಸಿ, ಮಾರಾಟಾಧಿಕಾರಿಗಳು ಹರಾಜು ನಡವಳಿಕೆಯಲ್ಲಿ ದಾಖಲಿಸಿ ಸಂಘದ ಹೆಸರಿಗೆ ಸ್ಥಿರಾಸ್ತಿಯನ್ನು ವರ್ಗಾಯಿಸಿಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ, ಈ ಬಗ್ಗೆ ಕಾಯ್ದೆ ಅನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗೊಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲ್ಗೊಳ್ಳದೇ ಇರುವ ಪ್ರಯುಕ್ತ ಹಾಗೂ ಸಂಘವು ಈ ಸ್ಥಿರಾಸ್ತಿಯನ್ನು ಸಾಲದ ಬಾಕಿ ಮೊತ್ತಕ್ಕೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಹಾಗೂ ಮಾರಾಟಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಮ ಬಾಕಿದಾರರು ಈ ಕೆಳಕಂಡ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರಡಿಯಲ್ಲಿ ಸಂಘದ ಹೆಸರಿಗೆ ವರ್ಗಾಯಿಸಲು ಈ ಕೆಳಕಂಡಂತೆ ಆದೇಶ ಮಾಡಿದೆ.

### ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: CMW/509/CLM/96 ದಿನಾಂಕ:21.03.1997ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಸ್.ಹೆಚ್. ಬೆಲ್ಲದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶ್ರೀ ಶ್ರೀಶೈಲ ಕ್ರೆಡಿಟ್ ಕೋ ಆಪ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ದಾವಾ ಸಂಖ್ಯೆ: 140/ 2002–03 ದಿನಾಂಕ:21.06.2002 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ:1530/ 2002–03 ಪ್ರಕಾರ ತೀರ್ಮ ಬಾಕಿದಾರರಾಗಿರುವ ಶ್ರೀಮತಿ ಶಕುಂತಲ ಅಲಿಯಾಸ್ ಶೋಭಾ ಕೋಂ ಹೆಚ್. ರುದ್ರಪ್ಪ, ದಾವಣಗೆರೆ ಇವರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ ನಿಟ್ಟುವಳ್ಳಿ ಗ್ರಾಮದ ಖಾತೆ ನಂ.115, ಮನೆ ನಂ.139/10, ಶಕ್ತಿ ಗ್ಯಾಸ್ ಹಿಂಭಾಗ ಇರುವ ಹೆಂಚಿನ ಮನೆಯನ್ನು ಸುತ್ತಳತೆ 40x30 ಅಡಿಗಳ ಮನೆಯನ್ನು ರೂ.4,46,338.00 (ನಾಲ್ಕು ಲಕ್ಷದ ನಲವತ್ತಾರು ಸಾವಿರದ ಮುನ್ನೂರ ಮೂವತ್ತೆಂಟು ರೂಪಾಯಿಗಳು) ಮೌಲ್ಯಕ್ಕೆ ಸದರಿಯವರ ಸಾಲದ ತೀರುವಳಿಗಾಗಿ ಸದರಿ ಸಂಘಕ್ಕೆ ವರ್ಗಾವಣೆ ಮಾಡಲು ಈ ಮೂಲಕ ಆದೇಶಿಸಿರುತ್ತೇನೆ.

ಈ ಸ್ಥಿರ ಸೊತ್ತಿನ ವರ್ಗಾವಣೆ ಪತ್ರವನ್ನು ಸಹಕಾರ ಕಾಯ್ದೆಯನುಸಾರ ನಮೂನೆ–8ರಲ್ಲಿ ಪ್ರತ್ಯೇಕವಾಗಿ ಲಗತ್ತಿಸಿದೆ. ಮೇಲ್ಕಾಣಿಸಿದ ಸ್ಥಿರಾಸ್ತಿಯನ್ನು ಸಂಘವು ತನ್ನ ಹೆಸರಿಗೆ ವರ್ಗಾಯಿಸಿಕೊಂಡು ತೀರ್ಮ ಬಾಕಿದಾರರಿಂದ ಸಂಘಕ್ಕೆ ಬರಬೇಕಾದ ಸಾಲದ ಬಾಕಿಯನ್ನು ತೀರುವಳಿ ಮಾಡಿಕೊಳ್ಳಲು ನಿರ್ದೇಶಿಸಿದೆ ಹಾಗೂ ಪ್ರತಿವಾದಿಯಿಂದ ಈ ಸ್ಥಿರ ಸೊತ್ತಿನ ವರ್ಗಾವಣೆಯಿಂದ ಪೂರ್ಣ ಮೊತ್ತ (ಸಾಲ) ವಸೂಲಿಯಾಗದಿದ್ದಲ್ಲಿ ಪ್ರತಿವಾದಿಯ ಇನ್ನಿತರ ಚರ–ಸ್ಥಿರಾಸ್ತಿಗಳನ್ನು ಜಪ್ತಿ ಬಹಿರಂಗ ಹರಾಜು ಮೂಲಕ ಬಾಕಿ ಮೊತ್ತವನ್ನು ವಸೂಲಿ ಮಾಡಿಕೊಳ್ಳತಕ್ಕದ್ದೆಂದು ಆದೇಶ ಮಾಡಿದೆ.

### ಆಸ್ತಿಯ ವಿವರ

ದಾವಣಗೆರೆ ನಗರದ ನಿಟ್ಟುವಳ್ಳಿ ಗ್ರಾಮದ ಖಾತೆ ನಂ.115 ಮನೆ ನಂ.139/10, ಶಕ್ತಿ ಗ್ಯಾಸ್ ಹಿಂಭಾಗ ಇರುವ ಹೆಂಚಿನ ಮನೆಯ ಸುತ್ತಳತೆ 40 x30 ಅಡಿಗಳು ಇದಕ್ಕೆ ಚಕ್ಕುಬಂದಿ: ಪೂರ್ವಕ್ಕೆ ಸೈಟ್ ನಂ. ಬಸಪ್ಪನವರ ಜಾಗ, ಪಶ್ಚಿಮಕ್ಕೆ ಹೆಚ್.ಆರ್. ಲಿಂಗಸ್ವಾಮಿ ಜಾಗ, ಉತ್ತರಕ್ಕೆ ಹೆಚ್.ಆರ್. ಮಂಜುನಾಥ ಜಾಗ, ದಕ್ಷಿಣಕ್ಕೆ ರಸ್ತೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:25.10.2007ರಂದು ಹೊರಡಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳ ಕಛೇರಿ, ದಾವಣಗೆರೆ ಉಪವಿಭಾಗ, ದಾವಣಗೆರೆ

### ನಮೂನೆ–8

### (ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ ಇದರ ರೀತ್ಯ)

ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ಕಾರ್ಯದರ್ಶಿಯವರು, ಶ್ರೀಮತಿ ಶಕುಂತಲಾ ಅಲಿಯಾಸ್ ಶೋಭಾ ಕೋಂ ಹೆಚ್. ರುದ್ರೇಶ್, ದಾವಣಗೆರೆ ಇವರಿಂದ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ವಸೂಲಾತಿಗಾಗಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿಯಲ್ಲಿ ದಾವಾ ಸಂಖ್ಯೆ: 140/2002–03 ಸದರಿಯವರಿಂದ ಸಂಘಕ್ಕೆ ಆಧಾರ ಮಾಡಿರುವ ಈ ಸರ್ಟಿಫಿಕೇಟ್‌ನ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು

ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ವಸೂಲಿ ಮಾಡಿಕೊಳ್ಳಲು ಅವಾರ್ಡನ್ನು ಪಡೆದಿದ್ದು ಇದನ್ನು ಜಾರಿಗೊಳಿಸಿ ಕಲಂ 101ರಡಿಯಲ್ಲಿ ಪಡೆಯಲಾದ ಅಮಲ್ಜಾರಿ ಪ್ರಕರಣದಲ್ಲಿ ದಿನಾಂಕ:16.09.2004 ಮತ್ತು 16.08.2007ಗಳಂದು ಸ್ಥಿರಾಸ್ತಿಯ ಬಹಿರಂಗ ಹರಾಜನ್ನು ಇಟ್ಟಿದ್ದು, ಈ ಎಲ್ಲಾ ದಿನಗಳಂದು ನಡೆಸಲಾದ ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದ್ದರಿಂದ ಸದರಿ ಸೊತ್ತನ್ನು ಮಾರಾಟ ಮಾಡಲಾಗಲಿಲ್ಲವೆಂದು ಸಕ್ಷಮ ಅಧಿಕಾರಿಯಾದ ನಾನು ಮನವರಿಕೆ ಮಾಡಿಕೊಂಡಿರುತ್ತೇನೆ.

ದಾವಾ ಸಂಖ್ಯೆ: 140/2002–03 ರಡಿಯಲ್ಲಿ ಪಡೆಯಲಾದ ಡಿಕ್ರಿ ಆದೇಶದ ಪ್ರಕಾರ ಸಂಘಕ್ಕೆ ಆಧಾರ ಮಾಡಲಾಗಿರುವ ತೀರ್ಪು ಬಾಕಿದಾರರ ಸ್ಥಿರಾಸ್ತಿಯ ಮೇಲೆ ಸಂಘವು ಹಕ್ಕನ್ನು ಹೊಂದಿರುವುದನ್ನು ಪರಿಗಣಿಸಿ, ಬಹಿರಂಗ ಹರಾಜುಗಳಲ್ಲಿ ಈ ಸ್ಥಿರಾಸ್ತಿಯು ಮಾರಾಟವಾಗಿಲ್ಲವೆಂದು ಮನವರಿಕೆ ಮಾಡಿಕೊಂಡು ಸಾಲದ ಬಾಕಿ ರೂ.4,46,338.00 (ನಾಲ್ಕು ಲಕ್ಷದ ನಲವತ್ತಾರು ಸಾವಿರದ ಮುನ್ನೂರಮೂವತ್ತೆಂಟು ರೂಪಾಯಿಗಳು) ಮೊತ್ತಕ್ಕೆ ಸಂಘದ ಸಾಲದ ತೀರುವಳಿಗಾಗಿ ಷೆಡ್ಯೂಲ್‌ನಲ್ಲಿ ಕಾಣಿಸಲಾಗಿರುವ ಸ್ಥಿರಾಸ್ತಿಯನ್ನು ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಪ್ ಸೊಸೈಟಿ ನಿಯಮಿತ, ದಾವಣಗೆರೆ, ಇದರ ಹೆಸರಿಗೆ ಅನುಬಂಧದಲ್ಲಿ ಕಾಣಿಸಲಾಗಿರುವ ಷರತ್ತುಗಳ ಮೇರೆಗೆ ವರ್ಗಾವಣೆ ಮಾಡಿರುತ್ತೇನೆ. ಮತ್ತು ತತ್ಸಂಬಂಧವಾಗಿ ಆದೇಶವನ್ನು ಮಾಡಿರುತ್ತೇನೆ.

**ಷೆಡ್ಯೂಲ್**

| ಸ್ಥಳ | ಸ್ಥಿರಾಸ್ತಿಯ ವಿವರ | ಅಳತೆ | ಸಾಲ ತೆಗೆದುಕೊಂಡಿರುವ ಸಾಮ್ಯ ಹಕ್ಕುಬಾಧ್ಯತೆ | ಮಾರುಕಟ್ಟೆ ಮೌಲ್ಯ | ಸೊತ್ತು ಒಳಪಟ್ಟಿರುವ ಸಾಲದ ವಿವರಗಳು |
|---|---|---|---|---|---|
| ದಾವಣಗೆರೆ | ದಾವಣಗೆರೆ ನಗರದ ನಿಟ್ಟುವಳ್ಳಿ ಖಾತೆ ನಂ.115, ಮನೆ ನಂ.139/10, ಶಕ್ತಿ ಗ್ಯಾಸ್ ಹಿಂಭಾಗ, ಇರುವ ಹೆಂಚಿನ ಮನೆ | 40 x30 ಅಡಿಗಳು | ಸ್ವಂತ ಸ್ವಾಧೀನ | ರೂ.3,00,000.00 | ಅಸಲು ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ ಒಟ್ಟು ರೂ.4,46,338/– ದಿನಾಂಕ:15.08.2007ರಲ್ಲಿ ಇದ್ದಂತೆ |

ಮೇಲ್ಕಂಡ ಸ್ಥಿರಾಸ್ತಿಗೆ ಚಕ್ಕುಬಂದಿ ಈ ಕೆಳಕಂಡಂತಿರುತ್ತದೆ.

ಪೂರ್ವಕ್ಕೆ ಸೈಟ್ ಬಸಪ್ಪನವರ ಜಾಗ, ಪಶ್ಚಿಮಕ್ಕೆ ಹೆಚ್.ಆರ್. ಲಿಂಗಸ್ವಾಮಿ ಜಾಗ, ಉತ್ತರಕ್ಕೆ ಹೆಚ್.ಆರ್. ಮಂಜುನಾಥ ಇವರ ಜಾಗ, ದಕ್ಷಿಣಕ್ಕೆ ರಸ್ತೆ.

**ಅನುಬಂಧ**

1) ಸ್ಥಿರಾಸ್ತಿಯು ಸಂಘಕ್ಕೆ ವರ್ಗಾವಣೆ ಮಾಡಿದ ನಂತರ, ನಿಗದಿತ ಅವಧಿಯಲ್ಲಿ ಸಂಘಕ್ಕೆ ಬರಬೇಕಾದ ಸಾಲದ ಬಾಕಿಗಳ ಸಂಬಂಧ ಜಮ–ಖರ್ಚುಗಳನ್ನು ಮಾಡಿಕೊಂಡು ಹೆಚ್ಚುವರಿ ಹಣವನ್ನು ಸಂಘಕ್ಕೆ ಕೊಡಬೇಕಾದ (ಬಾಕಿ) ಸಾಲ ಉಳಿದುಕೊಂಡಲ್ಲಿ ತೀರ್ಪುದಾರರಿಗೆ ತಿಳಿಸತಕ್ಕದ್ದು.

2) ಸಂಘಕ್ಕೆ ವರ್ಗಾವಣೆಯನ್ನು ಮಾಡಲಾಗಿರುವ ಸ್ಥಿರಾಸ್ತಿಯು ಸಂಘದ ಸ್ವಾಧೀನ, ಹಕ್ಕು ಬಾಧ್ಯತೆಗಳು ಮತ್ತು ನಿರ್ವಹಣೆಗೊಳಪಟ್ಟಿರುತ್ತದೆ.

3) ಸಂಘವು ಸ್ಥಿರಾಸ್ತಿಯನ್ನು ಯೋಗ್ಯ ಬೆಲೆಗೆ ಮಾರಾಟ ಮಾಡತಕ್ಕದ್ದು.

4) ಸ್ಥಿರಾಸ್ತಿಯನ್ನು ಮಾರಾಟ ಮಾಡುವ ಸಂದರ್ಭದಲ್ಲೂ ತೀರ್ಪು ಬಾಕಿದಾರರಿಗೆ ಅಥವಾ ಅವರ ಕುಟುಂಬದ ಸದಸ್ಯರಿಗೆ ಪ್ರಥಮ ಆದ್ಯತೆಯನ್ನು ನೀಡತಕ್ಕದ್ದು.

5) ಸ್ಥಿರಾಸ್ತಿಯು ಮಾರಾಟವಾಗುವವರೆಗೆ ಈ ಆಸ್ತಿಯಿಂದ ಸಂಘವು ವರಮಾನವನ್ನು ಗಳಿಸುವ ರೀತಿಯಲ್ಲಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಇದರ ಕುರಿತು ಸೂಕ್ತ ಲೆಕ್ಕ ಇತ್ಯಾದಿಗಳನ್ನು ಇಡತಕ್ಕದ್ದು.

6) ಈ ಸ್ಥಿರಾಸ್ತಿಯ ನಿರ್ವಹಣೆ ಸಂಬಂಧ ಖರ್ಚುಗಳು ಅಂದರೆ ಕಂದಾಯ, ತೆರಿಗೆ ಇತ್ಯಾದಿಗಳ ಕುರಿತಂತೆ ಸಂಘವು ವಹಿಸಿಕೊಳ್ಳತಕ್ಕದ್ದು ಮತ್ತು ಪ್ರತ್ಯೇಕವಾದ ಲೆಕ್ಕಗಳನ್ನು ಇಡತಕ್ಕದ್ದು.

ಸರ್ಟಿಫಿಕೇಟನ್ನು ದಿನಾಂಕ:25.10.2007ರಂದು ನನ್ನ ಸ್ವಸಹಿ ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ಕೊಟ್ಟಿರುತ್ತದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿ.ಆರ್.1384

## ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ನಡವಳಿಕೆಗಳು

### ಕ್ರ.ಸಂ. ಎಅರ್ 31/ದಾವಾ/ ಅಮಲ್ಜಾರಿ/ 64/ 2007–08, ದಿನಾಂಕ:25ನೇ ಅಕ್ಟೋಬರ್, 2007

ವಿಷಯ: ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ತೀರ್ಪು ಬಾಕಿದಾರರಾದ ಶ್ರೀ ಸಿದ್ದೇಶ್ವರ ಮೂರ್ತಿ ಬಿನ್ ಮಾವಿನಾಳಪ್ಪ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ಸಂಘದ ಹೆಸರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ಅಡಿಯಲ್ಲಿ ವರ್ಗಾಯಿಸುವ ಬಗ್ಗೆ.

ಉಲ್ಲೇಖ: 1) ದಾವಾ ಸಂಖ್ಯೆ: 199/ 2003–04 ದಿನಾಂಕ:21.06.2004.

2) ಅಮಲ್ಜಾರಿ ಪ್ರಕರಣ ಸಂಖ್ಯೆ: 313/ 2004–05.

3) ಮಾರಾಟಾಧಿಕಾರಿಗಳ ಪತ್ರದ ದಿನಾಂಕ:01.09.2007.

4) ಈ ಕಛೇರಿಯ ಸಮಸಂಖ್ಯೆಯ ಅಂತಿಮ ತಿಳುವಳಿಕೆ ಪತ್ರದ ದಿನಾಂಕ:13.09.2007.

ಪ್ರಸ್ತಾವನೆ:

ಶ್ರೀ ಶ್ರೀಶೈಲ ಕ್ರೆಡಿಟ್ ಕೋ–ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರಡಿಯಲ್ಲಿ ನೋಂದಣಿಯಾಗಿರುತ್ತದೆ. ಈ ಸಂಘದ ಸಾಲಗಾರರಾದ ಶ್ರೀ ಸಿದ್ದೇಶ್ವರ ಮೂರ್ತಿ ಬಿನ್ ಮಾವಿನಾಳಪ್ಪ, ದಾವಣಗೆರೆ ಇವರು ದಾವಣಗೆರೆ ಸಿ.ಟಿ., ಕೆ.ಬಿ. ಬಡಾವಣೆ, 5ನೇ ವಾರ್ಡ್, 7ನೇ ಡಿವಿಜನ್, ಸೈಟ್ ನಂ.29, ಮನೆ ನಂ.645/1–2ರ ಆರ್.ಸಿ.ಸಿ. ಮನೆಯ ಸುತ್ತಳತೆ 31x32.6 ಅಡಿಗಳ ಮನೆಯನ್ನು ಆಧಾರ ಮಾಡಿ ಸಾಲವನ್ನು ಪಡೆದಿರುತ್ತಾರೆ. ಸದರಿ ಸಾಲವನ್ನು ನಿಗದಿತ ಅವಧಿಯೊಳಗೆ ಮರುಪಾವತಿಸದೇ ಸುಸ್ತಿದಾರರಾಗಿರುತ್ತಾರೆ. ಸಂಘದವರು ಸದರಿ ಸಾಲದ ವಸೂಲಾತಿಗಾಗಿ ಸದರಿಯವರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 70ರಡಿಯಲ್ಲಿ ದಾವೆಯನ್ನು ಹೂಡಿರುತ್ತಾರೆ. ದಾವಾ ಸಂಖ್ಯೆ: 199/2003–04 ದಿನಾಂಕ:21.06.2002 ರಂದು ಒಟ್ಟು ರೂ.8,12,088.00ಗಳ ಮೊತ್ತವನ್ನು ಸದರಿಯವರಿಂದ ವಸೂಲಾತಿಗಾಗಿ ಡಿಕ್ರಿ ಆಗಿರುತ್ತದೆ. ಸದರಿ ಡಿಕ್ರಿಯ ಆಧಾರದ ಮೇಲೆ ಅಮಲ್ಜಾರಿ ಪ್ರಕರಣ ಸಂಖ್ಯೆ: 313/2004–05 ನ್ನು ಕಲಂ 101ರಡಿಯಲ್ಲಿ ದಾಖಲಿಸಿ ತೀರ್ಪುದಾರರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿ ಸಂಘಕ್ಕೆ ಬರಬೇಕಾದ ಸಾಲವನ್ನು ವಸೂಲಿ ಮಾಡಿಕೊಳ್ಳಲು ಕ್ರಮಕೈಗೊಂಡಿರುತ್ತಾರೆ. ಅಮಲ್ಜಾರಿ ಆದೇಶದ ಮೇರೆಗೆ ಮಾರಾಟಾಧಿಕಾರಿಗಳು ದಿನಾಂಕ:16.08.2007ರಂದು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಹರಾಜನ್ನು ನಡೆಸಿರುತ್ತಾರೆ. ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ. ಆದ ಕಾರಣ, ಈ ಆಸ್ತಿಯು ಮಾರಾಟವಾಗಿರುವುದಿಲ್ಲ.

ಬಹಿರಂಗ ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸಿರುವುದಿಲ್ಲ ಪ್ರಯುಕ್ತ ಸದರಿ ಆಸ್ತಿಯನ್ನು ಸಹಕಾರ ಸಂಘಗಳ ಕಾಯಿದೆ ನಿಯಮ 38(2)ರ ಪ್ರಕಾರ ಮಾರಾಟವಾಗದ ಆಸ್ತಿ ಎಂದು ತೀರ್ಮಾನಿಸಿ, ಸಂಘದ ಕಾರ್ಯಕಾರಿ ಮಂಡಳಿಯ ತೀರ್ಮಾನದಂತೆ ಸಹಕಾರ ಸಂಘಗಳ ಕಾಯ್ದೆ ಕಲಂ 101 ಬಿ ಪ್ರಕಾರ ಈ ಕೆಳಕಂಡ ಆಸ್ತಿಯನ್ನು ಸಂಘದ ಹೆಸರಿಗೆ ರೂ.8,12,088.00 ಗಳಿಗೆ ವರ್ಗಾಯಿಸಲು ತೀರ್ಮಾನಿಸಿ, ಮಾರಾಟಾಧಿಕಾರಿಗಳು ಹರಾಜು ನಡವಳಿಕೆಯಲ್ಲಿ ದಾಖಲಿಸಿ ಸಂಘದ ಹೆಸರಿಗೆ ಸ್ಥಿರಾಸ್ತಿಯನ್ನು ವರ್ಗಾಯಿಸಿಕೊಡಬೇಕೆಂದು ನಡವಳಿಕೆಯನ್ನು ಮಾಡಿ ಈ ಕಛೇರಿಗೆ ಪೂರ್ಣ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುವುದನ್ನು ಪರಿಗಣಿಸಿ, ಈ ಬಗ್ಗೆ ಕಾಯ್ದೆ ಅನುಸಾರ ಕ್ರಮ ಕೈಗೊಳ್ಳಬೇಕಾಗಿರುವುದನ್ನು ಮನಗೊಂಡಿರುತ್ತದೆ.

ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಪಾಲ್ಗೊಳ್ಳದೇ ಇರುವ ಪ್ರಯುಕ್ತ ಹಾಗೂ ಸಂಘವು ಈ ಸ್ಥಿರಾಸ್ತಿಯನ್ನು ಸಾಲದ ಬಾಕಿ ಮೊತ್ತಕ್ಕೆ ವರ್ಗಾವಣೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಿರುವ ಪ್ರಕಾರ ಹಾಗೂ ಮಾರಾಟಾಧಿಕಾರಿಗಳು ಸಲ್ಲಿಸಿದ ಪ್ರಸ್ತಾವನೆಯನ್ನು ಪುರಸ್ಕರಿಸಿ ತೀರ್ಪು ಬಾಕಿದಾರರು ಈ ಕೆಳಕಂಡ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101ರಡಿಯಲ್ಲಿ ಸಂಘದ ಹೆಸರಿಗೆ ವರ್ಗಾಯಿಸಲು ಈ ಕೆಳಕಂಡಂತೆ ಆದೇಶ ಮಾಡಿದೆ.

### ಆದೇಶ

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 101 ಬಿ ಹಾಗೂ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ ಮತ್ತು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: CMW/509/CLM/96 ದಿನಾಂಕ:21.03.1997ರಡಿಯಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಎಸ್.ಹೆಚ್. ಬೆಲ್ಲದ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಹಾಗೂ ವಸೂಲಾಧಿಕಾರಿ ಆದ ನಾನು ಶ್ರೀ ಶ್ರೀಶೈಲ ಕ್ರೆಡಿಟ್ ಕೋ ಆಫ್ ಸೊಸೈಟಿ ನಿಯಮಿತ, ದಾವಣಗೆರೆ ಇದರ ದಾವಾ ಸಂಖ್ಯೆ: 199/ 2003–04 ದಿನಾಂಕ:21.06.2002 ಮತ್ತು ಅಮಲ್ಜಾರಿ ಪ್ರಕರಣ ಸಂಖ್ಯೆ:313/ 2004–05 ಪ್ರಕಾರ ತೀರ್ಪು ಬಾಕಿದಾರರಾಗಿರುವ ಶ್ರೀ ಸಿದ್ದೇಶ್ವರ ಮೂರ್ತಿ ಬಿನ್ ಮಾವಿನಾಳಪ್ಪ, ದಾವಣಗೆರೆ ಇವರು ಸಂಘಕ್ಕೆ ಆಧಾರ ಮಾಡಿರುವ ಸ್ಥಿರಾಸ್ತಿಯಾದ ದಾವಣಗೆರೆ ಸಿ.ಟಿ. ಕೆ.ಬಿ. ಬಡಾವಣೆ, 5ನೇ ವಾರ್ಡ್, 7ನೇ ಡಿವಿಜನ್, ಸೈಟ್ ನಂ.29, ಮನೆ ನಂ.645/1–2ರ ಮನೆಯ ಸುತ್ತಳತೆ 31x32.6ರ ಅಡಿಗಳ ಮನೆಯನ್ನು ರೂ.8,12,088.00 (ಎಂಟು ಲಕ್ಷದ

i) For Sale
ii) For Crushing Sugarcane Juice or manufacture of Gur/Sakkare Gul/Jaggery/Rabi/or Khandasari for sale or self consumption :

I declare that, I am fully aware of the provisions of the Karnataka Sugarcane (Regulation of Distribution), 01 Shri Sangam Sahakari Sakkare Karkhane (N), Hidakal Dam, Hukkeri Taluk, Belgaum District Order 2007 and the particulars furnished in the application are true to the best of my knowledge and belief and the permit to be issued will be properly used for the purpose for which it is issued I have actually read-got read and understood the conditions of the permit given in Form No. 1 of the Schedule appended to the Karnataka Sugarcane (Regulation of Distribution), Shri Sangam Sahakari Sakkare Karkhane (N), Hidakal Dam, Hukkeri Taluk, Belgaum District Order 2007, and I agree to abide by them.

Place :

Date :

**SIGNATURE OF THE APPLICANT**

P.R. 985

**ಸಹಾಯಕ ಕಾರ್ಯಪಾಲಕ ಇಂಜಿನಿಯರ್ ನಂ. 4 ಲೋಕೋಪಯೋಗಿ ಉಪ–ವಿಭಾಗ ಹೊಳಲ್ಕೆರೆ**

**ಸುತ್ತೋಲೆ**

**ಕ್ರ.ಸಂ.ಸ:ಎ.ಇ.ಲೋ.ಉವಿಹೊ:ಸಾ.ಮಾ.ಹ ಅಧಿನಿಯಮ 2006–07/ 84–88 ದಿನಾಂಕ:15ನೇ ಮೇ 2007**

ಮಾಹಿತಿಹಕ್ಕು ಅಧಿನಿಯಮ 2006 ಸೆಕ್ಷನ್ 5(1) ರ ಅಡಿಯಲ್ಲಿ ಇಲಾಖಾ ಮುಖ್ಯಸ್ಥರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿರುವ ಕ್ಷೇತ್ರ ಕಛೇರಿಗಳಲ್ಲಿನ ಕಾರ್ಯವಿಧಾನದ ಬಗ್ಗೆ ಸಾರ್ವಜನಿಕ ಮಾಹಿತಿ ನೀಡಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ಇವರ ಅಧಿಸೂಚನೆ ಸಂಖ್ಯೆ:ಸಿಬಿಎಸ್: ಮಾಹಿತಿ ಹಕ್ಕು ಕೈಪಿಡಿ:2005:ಇಎಸ್ಎಲ್:05–06:ದಿನಾಂಕ:19–9–05ರ ಪ್ರಕಾರ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ನಂ. 4 ಲೋಕೋಪಯೋಗಿ ಉಪವಿಭಾಗ ಹೊಳಲ್ಕೆರೆ ಇವರು ವಿಶೇಷ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಸ್‌ಪಿಐಓ) ಯಾಗಿ ನೇಮಕಗೊಂಡಿದ್ದು ಮಾಹಿತಿ ನೀಡುವ ಪ್ರಕ್ರಿಯೆಯು ಸುಲಲಿತವಾಗಿ ನಡೆಯಲು ಅನುಕೂಲವಾಗುವಂತೆ ಶ್ರೀ ಗಜೇಂದ್ರಕುಮಾರ್ ಸಹಾಯಕ ಇಂಜಿನಿಯರ್ ನಂ. 4 ಲೋಕೋಪಯೋಗಿ ಉಪ–ವಿಭಾಗ ಹೊಳಲ್ಕೆರೆ ಇವರನ್ನು ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ (ಎಪಿಐಓ) ಯಾಗಿ ನೇಮಕಗೊಳಿಸಲಾಗಿದೆ.

ಈ ಕಛೇರಿಯ ಮಾಹಿತಿಗಳನ್ನು ಸಾರ್ವಜನಿಕರಿಗೆ ನೀಡುವ ಸಲುವಾಗಿ ಮಾಹಿತಿ ಹಕ್ಕು ಕೈಪಿಡಿ 2005ನ್ನು ಈ ಮೂಲಕ ಹೊರಡಿಸಲಾಗಿದೆ.

ಸಹಾಯಕ ಕಾರ್ಯಪಾಲಕ ಇಂಜಿನಿಯರ್ ನಂ. 4
ಲೋಕೋಪಯೋಗಿ ಉಪ–ವಿಭಾಗ ಹೊಳಲ್ಕೆರೆ.

ಪಿ.ಆರ್. 901

**ಕಂದಾಯ ಇಲಾಖೆ**

**ತಿದ್ದುಪಡಿ ಅಧಿಸೂಚನೆ**

**ಆದೇಶ ಸಂಖ್ಯೆ:ಕಂಇ 496 ಬಿಎಂಎಂ 2005 ದಿನಾಂಕ:3ನೇ ಜುಲೈ 2007**

ಸರ್ಕಾರದ ಅಧಿಸೂಚನೆ ಸಂಖ್ಯೆ ಕಂಇ 496 ಬಿಎಂಎಂ 05 ದಿನಾಂಕ:24.8.06 ರಂದು ಪ್ರಕಟಿಸಿದ ರಾಜ್ಯ ಮಟ್ಟದ ಉಪ ತಹಶೀಲ್ದಾರ್/ಶಿರಸ್ತೇದಾರರ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ನೌಕರರುಗಳ ಹೆಸರು, ಹುಟ್ಟಿದ ದಿನಾಂಕ, ನೇಮಕಾತಿ ದಿನಾಂಕ, ಡಿ.ಆರ್. ಬದಲು ಪಿ.ಆರ್. ಎಂದು ತಪ್ಪಾಗಿ ಮುದ್ರಿತವಾಗಿರುವುದು, ಜೇಷ್ಠತೆಯನ್ನು ಸರಿಯಾಗಿ ನಿಗದಿಪಡಿಸದೇ ಇರುವ ಬಗ್ಗೆ ಕೆಲವಾರು ನೌಕರರು ಸರ್ಕಾರಕ್ಕೆ ಮನವಿ ಸಲ್ಲಿಸಿ ಅಂತಿಮ ಜೇಷ್ಠತಾ ಪಟ್ಟಿಯಲ್ಲಿರುವ ದೋಷಗಳನ್ನು ಸರಿಪಡಿಸಲು ಕೋರಿದ್ದರು. ಈ ಮನವಿಗಳ ಜೊತೆ ನೌಕರರು ಸಲ್ಲಿಸಿರುವ ದಾಖಲೆಗಳನ್ನು ಪರಿಶೀಲಿಸಿ ಮತ್ತು ಸಂಬಂಧಿಸಿದ ಜಿಲ್ಲಾಧಿಕಾರಿಗಳು ನೀಡಿರುವ ವರದಿಗಳನ್ನು ಆಧರಿಸಿ ಅಂತಿಮ ಜೇಷ್ಠತಾ ಪಟ್ಟಿಯ ಅಧಿಸೂಚನೆ ಸಂಖ್ಯೆ:ಕಂಇ 496 ಬಿಎಂಎಂ 2005 ದಿನಾಂಕ:24.8.06 ರಲ್ಲಿ ಪ್ರಕಟಗೊಂಡಿರುವ ಜೇಷ್ಠತಾ ಪಟ್ಟಿಗೆ ಈ ಕೆಳಗಿನಂತೆ ತಿದ್ದುಪಡಿ ಮಾಡಲಾಗಿದೆ.

| ಕ್ರ. ಸಂ. | ರಾಜ್ಯಮಟ್ಟದ ಶಿರಸ್ತೇದಾರರ ಜೇಷ್ಠತಾ ಪಟ್ಟಿಯಲ್ಲಿನ ಕ್ರಮ ಸಂಖ್ಯೆ | ನೌಕರರ ಹೆಸರು | ಡಿ ಆರ್ ಪಿಆರ್ | ವಿಭಾಗ | ಹುಟ್ಟಿದ ದಿನಾಂಕ | ನೌಕರರು ಸೇವೆಗೆ ಸೇರಿದ ದಿನಾಂಕ | ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 3898 ಸಿ | ಶ್ರೀ ಇ.ಡಿ. ಬ್ಯಂಗಿ | ಡಿಆರ್ | ಬೆಳಗಾಂ | 21–01–53 | 14–2–77 | 19–11–82 | ಶಿರಸ್ತೇದಾರ್ |

ಮೇಲ್ಕಂಡ ನೌಕರರ ಹೆಸರನ್ನು ದಿನಾಂಕ:24.8.06 ರಂದು ಪ್ರಕಟವಾದ ರಾಜ್ಯಮಟ್ಟದ ಶಿರಸ್ತೇದಾರ/ಉಪ ತಹಶೀಲ್ದಾರ ಜೇಷ್ಠತಾ ಪಟ್ಟಿಯಲ್ಲಿ ಕ್ರಮ ಸಂಖ್ಯೆ 4399 ನ್ನು ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಸೇವೆಗಳು)

ಪಿ.ಆರ್. 956

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–2 ಚಿಕ್ಕಮಗಳೂರು ಜಿಲ್ಲೆ**
**ಸಂಖ್ಯೆ:ಕಾಪಕಾ:ಎಫ್‌ಸಿ:41/2007, ದಿನಾಂಕ:3ನೇ ನವೆಂಬರ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀ ನಂಜುಂಡಸ್ವಾಮಿ ಬಿನ್ ದೇವಯ್ಯ 44 ವರ್ಷ ವಯಸ್ಸು, ವಾಸ:ಮಲಗನಗೆರೆ, ಮಾಕೋಡು ಅಂಚೆ, ಪಿರಿಯಾಪಟ್ಟಣ ತಾಲ್ಲೂಕು ಮೈಸೂರು ಜಿಲ್ಲೆ

1) ಮೆ:ಎಸ್.ಎಲ್.ಎನ್.ಕಾಫಿ ಕ್ಯೂರಿಂಗ್ ಕುಡುರು ಏರಿಯಾ ಕುಶಾಲನಗರ, ಮಡಿಕೇರಿ ಜಿಲ್ಲೆ
2) ವ್ಯವಸ್ಥಾಪಕರು, ಯುನೈಟೆಡ್ ಇಂಡಿಯಾ ಇನ್‌ಶೂರೆನ್ಸ್ ಕಂಪೆನಿ ಲಿಮಿಟೆಡ್, ಶಾಖಾ ಕಛೇರಿ, ಮಡಿಕೇರಿ.

**ಪ್ರಕಟಣೆ**

ಅರ್ಜಿದಾರನ ಮಗನಾದ ಪುನೀತ್ ಎಂಬುವವರು 1ನೇ ಪ್ರತಿವಾದಿಯಲ್ಲಿ ಕೆಲಸದ ಮೇಲಿದ್ದಾಗ ದಿನಾಂಕ: 14–6–2006ರಂದು ಅಪಘಾತ ಉಂಟಾಗಿ ಮೃತಪಟ್ಟಿರುವ ಬಗ್ಗೆ ಪರಿಹಾರ ಕೋರಿ ಮೇಲ್ಕಂಡ ಅರ್ಜಿದಾರರು ಅರ್ಜಿಯನ್ನು ಈ ನ್ಯಾಯಾಲಯದಲ್ಲಿ ಸಲ್ಲಿಸಿರುತ್ತಾರೆ ಹಾಗೂ ಶ್ರೀ ನಂಜುಂಡಸ್ವಾಮಿ ಬಿನ್ ದೇವಯ್ಯ ಇವರೊಬ್ಬರೇ ಮೃತನ ಅವಲಂಬಿತರೆಂದು ತಿಳಿಸಿ ಪರಿಹಾರವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–2, ಚಿಕ್ಕಮಗಳೂರು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ ಉಪವಿಭಾಗ–2 ಚಿಕ್ಕಮಗಳೂರು ಜಿಲ್ಲೆ**
**ಸಂಖ್ಯೆ:ಕಾಪಕಾ:ಎನ್‌ಎಫ್‌ಸಿ:43/2007, ದಿನಾಂಕ:3ನೇ ನವೆಂಬರ್ 2007**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

1) ಶ್ರೀಮತಿ ಬಿ.ಎಸ್. ಲತಾ ವಯಸ್ಸು ಸುಮಾರು 21 ವರ್ಷ ಕೋಂ ಲೇಟ್ ಮಹೇಶ, ವಾಸ:ಕುಸ್ಬೂರು ಗ್ರಾಮ ಸೋಮವಾರಪೇಟೆ ತಾ: ಕೊಡಗು ಜಿಲ್ಲೆ
2) ಬೇಬಿ ಸೌಜನ್ಯ ಬಿನ್ ಲೇಟ್ ಮಹೇಶ್, 2 ವರ್ಷ ವಾಸ: ಕುಸ್ಬೂರು ಗ್ರಾಮ, ಸೋಮವಾರಪೇಟೆ ತಾ: ಕೊಡಗು ಜಿಲ್ಲೆ

1) ಮೆ:ಕೂವೆರ್ ಕೊಲ್ಲಿ ಎಸ್ಟೇಟ್, ಪಿ.ಬಿ. ನಂ:3, ಸೋಮವಾರಪೇಟೆ ಅಂಚೆ ಕೊಡಗು ಜಿಲ್ಲೆ–571236
2) ಮೆ: ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ. ಶಾಖಾ ಕಛೇರಿ, ವಿರಾಜಪೇಟೆ, ಕೊಡಗು ಜಿಲ್ಲೆ

**ಪ್ರಕಟಣೆ**

ಮೃತ ಮಹೇಶ್ ಮರಣದ ಸಂಬಂಧವಾಗಿ 1ನೇ ಪ್ರತಿವಾದಿಯಾದ ಮೆ: ಮೆ:ಕೂವೆರ್ ಕೊಲ್ಲಿ ಎಸ್ಟೇಟ್, ಪಿ.ಬಿ. ನಂ:3, ಸೋಮವಾರಪೇಟೆ ಅಂಚೆ ಕೊಡಗು ಜಿಲ್ಲೆ–571236 ಅವರು 2,03,353=00, ರೂ. ಗಳ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿಗೊಳಿಸಿರುತ್ತಾರೆ.

ಮೃತನ ಪತ್ನಿಯಾದ ಶ್ರೀಮತಿ ಬಿ.ಎಸ್. ಲತಾ, ಮೃತನ ಮಗಳಾದ ಬೇಬಿ ಸೌಜನ್ಯ ಇವರು ಈ ನ್ಯಾಯಾಲಯದಲ್ಲಿ ಮೃತನ ನಿಜವಾದ ವಾರಸುದಾರರು ತಾವೆಂದು ಅರ್ಜಿ ಸಲ್ಲಿಸಿದ್ದು ದಿ:2.11.2007 ರಂದು ಆದೇಶವಾಗಿರುತ್ತದೆ. 1ನೇ ಪ್ರತಿವಾದಿಯು ಠೇವಣಿಗೊಳಿಸಿರುವ ಪರಿಹಾರವನ್ನು 1 ಮತ್ತು 2 ನೇ ಅರ್ಜಿದಾರರಿಗೆ ಈ ನ್ಯಾಯಾಲಯದ ಆದೇಶದನ್ವಯ ಬಿಡುಗಡೆಗೊಳಿಸಬೇಕಾಗಿರುತ್ತದೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಹೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದು ನಿಗಧಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ ಮೃತನ ಅವಲಂಬಿತರು ಯಾರು ಇಲ್ಲ ಎಂದು ಪರಿಗಣಿಸಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲಾಗುವುದು

**ಹೆಚ್. ಗೋಪಾಲಗೌಡ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ
ಆಯುಕ್ತರು, ಉಪವಿಭಾಗ–2, ಚಿಕ್ಕಮಗಳೂರು

ಪಿ.ಆರ್. 1433